## ಬಿನ್ನಹ

ಜರ್ಮನಿ ದೇಶದ ಪ್ರಖ್ಯಾತ ಜನಪದ ಕಥಾಸಂಗ್ರಾಹಕರಾದ ಗ್ರಿಮ್ ಸಹೋದರರ ಹನ್ನೊಂದು ಕತೆಗಳ ಕನ್ನಡ ಅನುವಾದವನ್ನು ಮುಂದೆ ಕೊಟ್ಟಿದ್ದೇನೆ. ಅಚ್ಚಿನಲ್ಲಿರುವ ಇನ್ನೆರಡು ಹೊತ್ತಿಗೆಗಳು ಹೊರಬಿದ್ದಾಗ ಗ್ರಿಮ್ ಕತೆಗಳ ಪರಿಚಯ ನಮ್ಮ ನಾಡಿನ ಬಾಲಕ ಬಾಲಕಿಯರಿಗೆ ಸಾಕಷ್ಟು ದೊರೆಯುವುದೆಂದು ನಂಬಿದ್ದೇನೆ. ಪಾಶ್ಚಾತ್ಯದೇಶಗಳಲ್ಲಿ ಈ ಕತೆಗಳನ್ನು ಓದದ ಹುಡುಗರು ಅಪರೂಪ. ಸಣ್ಣವರ ಕಣ್ಣಿಗೆ ಆಕರ್ಷಕವಾಗುವಂತೆ ಬಣ್ಣಬಣ್ಣದ ಚಿತ್ರಗಳಿಂದ ತುಂಬಿದ ಅಗ್ಗವಾದ ಅಸಂಖ್ಯಾತ ಪುಟ್ಟ ಪುಸ್ತಕಗಳು ಮಕ್ಕಳಿಗಾಗಿಯೇ ಅಲ್ಲಿ ತಯಾರಾಗುತ್ತವೆ. ಇಂಗ್ಲಂಡಿನಲ್ಲಿ ಪ್ರಕಟವಾಗಿರುವ ಶಿಶುಸಾಹಿತ್ಯದ ಸಚಿತ್ರಗ್ರಂಥಗಳನ್ನು ನೋಡಿದಾಗ "ಎಂದು ಇಂತಹ ಕನ್ನಡ ಪುಸ್ತಕಗಳು ನಮ್ಮ ಕಿರಿಯರ ಕೈಸೇರುವುದು?" ಎಂಬ ಈರ್ಷೆ ಮೂಡುತ್ತದೆ. ಆದರೆ ಕಾಗದದ ಅಭಾವವೂ ಮುದ್ರಣಕಾರ್ಯದಲ್ಲಿ ತೊಂದರೆಗಳೂ ವಿಪರೀತವಾಗಿರುವ ಈ ಕಾಲದಲ್ಲಿ ಈ ಕತೆಗಳನ್ನು ಇಷ್ಟುಮಟ್ಟಿಗೆ ಒಟ್ಟಿಗೆ ಬೆಳಕಿಗೆ ತರಲು ಸಾಧ್ಯವಾಯಿತಲ್ಲಾ ಎಂದು ಸಮಾಧಾನಪಟ್ಟುಕೊಳ್ಳಬೇಕಾಗಿದೆ. ಇದಕ್ಕೆ ತಕ್ಕ ಸೌಲಭ್ಯವನ್ನು ಒದಗಿಸಿಕೊಟ್ಟ ಎಲ್ಲಗೆಳೆಯರಿಗೂ ನಾನು ಋಣಿಯಾಗಿದ್ದೇನೆ.

"ಚಕ್ರವರ್ತಿಯ ಕೋಗಿಲೆ"ಯಲ್ಲಿ ಅನುಸರಿಸಿದ ಅನುವಾದ ಕ್ರಮವನ್ನೇ ಇಲ್ಲೂ ಅನುಸರಿಸಿ, ಆವಶ್ಯಕತೆ ತೋರಿದಾಗಲೆಲ್ಲಾ ಕತೆಗಳ ಸನ್ನಿವೇಶಗಳೂ ಹೆಸರುಗಳೂ ನಮ್ಮ ಸಮಾಜದಲ್ಲಿ ಸಹಜವಾಗಿ ಕಾಣುವಂತೆ ಹಲಕೆಲವು ಬದಲಾವಣೆಗಳನ್ನು ಮಾಡಿದ್ದೇನೆ.

ಅಚ್ಚಿನ ಕರಡು ಪ್ರತಿಗಳನ್ನು ತಿದ್ದುವುದರಲ್ಲಿ ನೆರವಾದ ನನ್ನ ಭಾವಂದಿರು ಶ್ರೀ|| ಎನ್. ಸುಬ್ಬರಾಯ್ಡುರಿಗೂ, ಪುಸ್ತಕವನ್ನು ಆದಷ್ಟು ಬೇಗ ಅಂದವಾಗಿ ಅಚ್ಚುಮಾಡುವುದರಲ್ಲಿ ಆಸಕ್ತಿ ವಹಿಸಿದ ಓಂಕಾರ್ ಮುದ್ರಣಾಲಯದ ಶ್ರೀ ನಾರಾಯಣರಾಯರಿಗೂ ನನ್ನ ವಂದನೆಗಳು ಸಲ್ಲಬೇಕು.

ಬೆಂಗಳೂರು ನಗರ
೧೨-೪-೧೯೪೭

ಎಂ. ರಾಮರಾವ್

## ವಿ ಷ ಯ ಸೂ ಚಿ ಕೆ

# ಮಂಜಿನ ಮಣಿ

ಒಂದು ಊರಿನಲ್ಲಿ ಒಬ್ಬ ರಾಣಿಯಿದ್ದಳು. ಅವಳಿಗೆ ಒಬ್ಬ ಪುಟ್ಟ ಮಗಳಿದ್ದಳು. ಒಂದು ದಿವಸ ರಾಣಿ ಅರಮನೆಯ ಉಪ್ಪರಿಗೆಯಲ್ಲಿ ಕಿಟಕಿಯ ಪಕ್ಕದಲ್ಲಿ ಕುಳಿತು ಕಸೂತಿ ಹೆಣೆಯುತ್ತಿದ್ದಳು. ಆ ಕಿಟಕಿಯ ಬಾಗಿಲು ಚೌಕಟ್ಟುಗಳು ಸೊಗಸಾದ ಹೊಳೆಯುವ ಕರಿಯ ಮರದಿಂದ ತಯಾರಾಗಿದ್ದುವು. ರಾಣಿ ಹಾಗೆಯೇ ಕಿಟಕಿಯಿಂದ ಹೊರಗಡೆಗೆ ಕಣ್ಣೆತ್ತಿ ನೋಡಿದಳು. ಆಚೆ ಅರಮನೆಯ ಹೂದೋಟದಲ್ಲಿ ಹಸುರು ಹುಲ್ಲು ಸೊಂಪಾಗಿ ಬೆಳೆದಿತ್ತು. ಹುಲ್ಲಿನ ಮೇಲೆ ಲೆಕ್ಕವಿಲ್ಲದಷ್ಟು ಮಂಜಿನ ಹನಿಗಳು ಬೆಳಗಿನ ಸೂರ್ಯನ ಬಿಸಿಲಿನಲ್ಲಿ ಥಳಥಳಿಸುತ್ತಿದ್ದುವು. ಅವನ್ನು ನೋಡುತ್ತಾ ನೋಡುತ್ತಾ ರಾಣಿ ಯಾವುದೋ ಜ್ಞಾನದಲ್ಲಿ ಕಸೂತಿಯ ಸೂಜಿಯಿಂದ ಕೈಯನ್ನು ಚುಚ್ಚಿಕೊಂಡುಬಿಟ್ಟಳು. ಅವಳ ಬೆರಳಿನಿಂದ ಮೂರು ತೊಟ್ಟು ರಕ್ತ ಉದುರಿತು. ಅದನ್ನೆಲ್ಲಾ ನೋಡಿ ರಾಣಿ ಸ್ವಲ್ಪ ಹೊತ್ತು ಏನೋ ಯೋಚಿಸುತ್ತಿದ್ದು ಅನಂತರ "ನನ್ನ ಮಗಳು ಆ ಮಂಜಿ ನಂತೆ ಬಿಳುಪಾಗಿರಲಿ, ಈ ರಕ್ತದಂತೆ ಕೆಂಪಗಿರಲಿ, ಕಿಟಕಿಯ ಮರವಂತೆ ಕಪ್ಪಗಿರಲಿ" ಎಂದು ದೇವರನ್ನು ಬೇಡಿಕೊಂಡಳು.

ರಾಜಕುಮಾರಿ ದೊಡ್ಡವಳಾದ ಹಾಗೆಲ್ಲಾ ರಾಣಿಯ ಅಪೇಕ್ಷೆ ಕೈಗೂಡಿತು. ಹುಡುಗಿ ಮಂಜಿನಂತೆ ಮೃದುವಾಗಿ ಬೆಳ್ಳಗೆ ಚೆಲುವೆ ಯಾಗಿದ್ದಳು. ಅವಳ ಕೆನ್ನೆಗಳ ಮೇಲೆ ರಕ್ತದ ಬಣ್ಣ ಹರಡಿತ್ತು. ಅವಳ ತಲೆಯ ಕೂದಲು ಕಿಟಕಿಯ ಮರದಷ್ಟೇ ಕಪ್ಪಗಿತ್ತು. ಅವಳಿಗೆ "ಮಂಜಿನ ಮಣಿ" ಎಂಬ ಹೆಸರು ಬಂತು.

ಪಾಪ, ರಾಜಕುಮಾರಿಯ ದುರದೃಷ್ಟ! ರಾಣಿ ಸತ್ತುಹೋದಳು. ಆಮೇಲೆ ಸ್ವಲ್ಪ ದಿನಗಳಲ್ಲೇ ರಾಜ ಬೇರೆ ಹೆಂಡತಿಯನ್ನು ಮದುವೆಯಾದ.

ಈ ಎರಡನೆ ಹೆಂಡತಿ ಬಹಳ ಚೆಲುವೆಯಾಗಿದ್ದಳು. ತನ್ನಂತಹ ಸುಂದರಿ ಲೋಕದಲ್ಲಿ ಇನ್ನು ಯಾರೂ ಇಲ್ಲ ಎಂದು ಅವಳು ಹೆಮ್ಮೆಪಡುತ್ತಿದ್ದಳು. ಅಷ್ಟೇ ಅಲ್ಲ. ತನಗಿಂತಲೂ ಚೆಲುವೆಯರು ಯಾರಾದರೂ ಇರುವರೆಂದು ತಿಳಿದರೆ ಅವಳಿಗೆ ಹೊಟ್ಟೆ ಉರಿಯುತ್ತಿತ್ತು. ಅವಳ ಹತ್ತಿರ ಒಂದು ಮಂತ್ರಶಕ್ತಿಯುಳ್ಳ ಮಾತಾಡಬಲ್ಲ ಕನ್ನಡಿಯಿತ್ತು. ಅವಳು ಆ ಕನ್ನಡಿಯ ಮುಂದೆ ನಿಂತು ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು "ಕನ್ನಡಿಯೆ, ನಿಜ ಹೇಳು, ರಾಜ್ಯದಲ್ಲೆಲ್ಲಾ ಅತ್ಯಂತ ಸುಂದರಿ ಯಾರು ?" ಎಂದು ಪ್ರಶ್ನೆ ಮಾಡುತ್ತಿದ್ದಳು. ಆ ಕನ್ನಡಿ "ರಾಣಿಯೆ, ರಾಜ್ಯದಲ್ಲೆಲ್ಲಾ ನಿನ್ನನ್ನು ಮೀರಿಸುವ ಸುಂದರಿ ಯಾರೂ ಇಲ್ಲ" ಎಂದು ಉತ್ತರ ಕೊಡುತ್ತಿತ್ತು.

ಹೀಗಿರಲು, ಮಂಜಿನ ಮಣಿ ದಿನೇ ದಿನೇ ಹೆಚ್ಚು ಚೆಲುವೆಯಾಗಿ ಬೆಳೆಯುತ್ತಿದ್ದಳು. ವಯಸ್ಸಾದಂತೆಲ್ಲಾ ಅವಳು ಹಗಲಿನ ಬೆಳಕಿನಂತೆ ತೊಳಗತೊಡಗಿದಳು. ಚೆಲುವಿನಲ್ಲಿ ಅವಳು ರಾಣಿಯನ್ನೇ ಮೀರಿಸಿಬಿಟ್ಟಳು. ಒಂದು ದಿನ ರಾಣಿ ತನ್ನ ಕನ್ನಡಿಯ ಮುಂದೆ ಹೋಗಿ ನಿಂತು ಎಂದಿನಂತೆ ಪ್ರಶ್ನೆ ಕೇಳಲು, ಕನ್ನಡಿ "ರಾಣಿಯೆ, ನೀನು ಬಹಳ ಚೆಲುವೆಯೆನ್ನುವುದೇನೋ ನಿಜ. ಆದರೆ ಮಂಜಿನ ಮಣಿ ನಿನಗಿಂತಲೂ ಎಷ್ಟೋ ಪಾಲು ಹೆಚ್ಚು ಚೆಲುವೆಯಾಗಿದ್ದಾಳೆ" ಎಂದು ಹೇಳಿತು.

ಇದನ್ನು ಕೇಳಿ ರಾಣಿಯ ಕೋಪ ಉಕ್ಕಿತು. ಅಸೂಯೆಯಿಂದ ಅವಳ ಮುಖವೆಲ್ಲಾ ಬೆಳ್ಳಗಾಯಿತು. ಕೂಡಲೆ ಅವಳು ಒಬ್ಬ ಸೇವಕನನ್ನು ಕರೆದು "ಮಂಜಿನ ಮಣಿಯನ್ನು ಎತ್ತಿಕೊಂಡು ಹೋಗಿ ಯಾವುದಾದರೂ ದೂರದ ಕಾಡಿನಲ್ಲಿ ಕೊಂದುಬಿಟ್ಟುಬಾ. ನಾನು ಮತ್ತೆ ಅವಳ ಮುಖ ನೋಡಕೂಡದು!" ಎಂದು ಅಪ್ಪಣೆ ಮಾಡಿದಳು. ಸೇವಕ ಮಂಜಿನ ಮಣಿಯನ್ನು ಕಾಡಿಗೆ ಕರೆದುಕೊಂಡು ಹೋದ. ಅಲ್ಲಿ ಆ ಹುಡುಗಿಯ ಪರಿಸ್ಥಿತಿಯನ್ನು ನೋಡಿ ಅವನಿಗೆ ಕನಿಕರ ಹುಟ್ಟಿತು. ಅವಳು ಅವನನ್ನು "ದಮ್ಮಯ್ಯ, ನನ್ನನ್ನು ಕೊಲ್ಲಬೇಡ" ಎಂದು ಬೇಡಿಕೊಂಡಳು. ಅವನ ಮನಸ್ಸು ಕರಗಿತು. ಆದ್ದರಿಂದ ಅವನು ಅವಳನ್ನು ಕೊಲ್ಲದೆ ಸುಮ್ಮನೆ ಕಾಡಿನಲ್ಲಿ ಬಿಟ್ಟು ಅರಮನೆಗೆ ಹಿಂದಿರುಗಿದ. ಹುಡುಗಿ ಯಾವುದಾದರೂ

ಒಂದು ಕಾಡುಪ್ರಾಣಿಯ ಬಾಯಿಗೆ ತುತ್ತಾಗುವಳೆಂದು ಅವನು ನಂಬಿದ್ದ. ಆದರೂ ತಾನೇ ಅವಳನ್ನು ಕೊಲ್ಲದೆ ಇದ್ದುದರಿಂದ ಅವನ ಮನಸ್ಸಿಗೆ ಒಂದು ರೀತಿ ಸಮಾಧಾನವಾಗಿತ್ತು.

ಮಂಜಿನ ಮಣಿ ಒಬ್ಬಳೇ ಕಾಡಿನಲ್ಲಿ ಅಲೆದಾಡಿದಳು. ಅವಳ ಹೃದಯ ಹೆದರಿಕೆಯಿಂದ ತುಂಬಿಹೋಗಿತ್ತು. ಕಾಡಿನ ಮೃಗಗಳು ಅವಳ ಸುತ್ತಲೂ ಕೂಗಾಡುತ್ತಿದ್ದವು. ಆದರೆ ದೇವರ ದಯೆಯಿಂದ ಯಾವ ಪ್ರಾಣಿಯೂ ಅವಳ ತಂಟೆಗೆ ಬರಲಿಲ್ಲ. ಸಾಯಂಕಾಲದ ಹೊತ್ತಿಗೆ ಅವಳು ಒಂದು ಸಣ್ಣ ಗುಡಿಸಲಿಗೆ ಬಂದಳು. ಅವಳ ಕಾಲು ಸೋತು ಹೋಗಿದ್ದವು. ಆದ್ದರಿಂದ ಅವಳು ಗುಡಿಸಲಿನಲ್ಲಿ ವಿಶ್ರಮಿಸಿಕೊಳ್ಳಬೇಕೆಂದು ನಿರ್ಧರಿಸಿ ಅದನ್ನು ಪ್ರವೇಶಿಸಿದಳು. ಒಳಗೆ ಎಲ್ಲವೂ ಚೊಕ್ಕಟವಾಗಿ ಅಚ್ಚುಕಟ್ಟಾಗಿತ್ತು. ಒಂದು ಕಡೆ ಏಳು ಪುಟ್ಟ ಮಣೆಗಳಿದ್ದವು. ಒಂದೊಂದು ಮಣೆಯ ಮುಂದೆಯೂ ಒಂದೊಂದು ಬೆಳ್ಳಿಯ ತಟ್ಟೆಯಿತ್ತು. ಪ್ರತಿಯೊಂದು ತಟ್ಟೆಯಲ್ಲೂ ಒಂದೊಂದು ಗೋಧಿಯ ರೊಟ್ಟಿ, ಸ್ವಲ್ಪ ಸಕ್ಕರೆ ತುಪ್ಪ ಇದ್ದವು. ತಟ್ಟೆಗಳ ಪಕ್ಕದಲ್ಲೇ ಏಳು ಲೋಟಗಳ ತುಂಬಾ ಹಾಲು ಇತ್ತು. ಏಳು ಬಟ್ಟಲುಗಳಲ್ಲಿ ಕುಡಿಯುವ ನೀರಿತ್ತು. ಇನ್ನೊಂದು ಕಡೆ ಗೋಡೆಯ ಮಗ್ಗುಲಿಗೆ ಏಳು ಪುಟ್ಟ ಹಾಸುಗೆಗಳಿದ್ದವು. ಮಂಜಿನ ಮಣಿಗೆ ಬಹಳ ಹಸಿವಾಗಿತ್ತು. ಅದನ್ನು ತಡೆಯಲಾರದೆ ಅವಳು ಒಂದೊಂದು ರೊಟ್ಟಿಯಿಂದಲೂ ಒಂದೊಂದು ಚೂರನ್ನು ಮುರಿದು ಸಕ್ಕರೆಯಲ್ಲಿ ಅದ್ದಿ ತಿಂದಳು. ಹಾಗೆಯೇ ಒಂದೊಂದು ಲೋಟದಿಂದಲೂ ಒಂದೊಂದು ಗುಟುಕು ಹಾಲನ್ನು ಕುಡಿದಳು. ಅನಂತರ ಅವಳಿಗೆ ಮಲಗಬೇಕೆನ್ನಿಸಿತು. ಆದ ಕಾರಣ ಅವಳು ಒಂದೊಂದಾಗಿ ಎಲ್ಲಾ ಹಾಸುಗೆಗಳ ಮೇಲೂ ಮಲಗಿ ನೋಡಿದಳು. ಆರು ಹಾಸುಗೆಗಳು ಅವಳಿಗೆ ಬಹಳ ಉದ್ದವಾಗಿದ್ದವು. ಏಳನೆಯ ಹಾಸುಗೆ ಅವಳಿಗೆ ಸ್ವಲ್ಪವೂ ಹೆಚ್ಚುಕಡಿಮೆಯಾಗದೆ ಸರಿಹೋಯಿತು. ಅವಳು ಅದರ ಮೇಲೆ ಮಲಗಿ ಹೊದ್ದಿಕೆಯನ್ನು ಎಳೆದುಕೊಂಡು ಬೆಚ್ಚಗೆ ನಿದ್ದೆಹೋದಳು.

ಸ್ವಲ್ಪ ಹೊತ್ತಿನಲ್ಲೇ ಗುಡಿಸಲಿನ ಒಡೆಯರಾದ ಏಳು ಜನ ಪುಟ್ಟ ಮನುಷ್ಯರು ಬಂದರು. ಇವರು ಹಗಲೆಲ್ಲಾ ಕಾಡಿನಲ್ಲಿ ಅಲೆದು, ನೆಲವನ್ನು

ಅಗೆದು ಬೆಳ್ಳಿ ಬಂಗಾರವನ್ನು ಹುಡುಕಿ ತೆಗೆದು, ರಾತ್ರಿ ಮಾತ್ರ ಗುಡಿಸಲಿ ನಲ್ಲಿರುತ್ತಿದ್ದರು. ಒಳಗೆ ಬಂದ ಕೂಡಲೆ ಅವರೆಲ್ಲರೂ ಒಬ್ಬೊಬ್ಬನು ಒಂದೊಂದರಂತೆ ಏಳು ದೀಪಗಳನ್ನು ಹೊತ್ತಿಸಿಕೊಂಡು ಸುತ್ತಲೂ ನೋಡಿದರು. ಮನೆ ಆ ದಿವಸ ದಿನವೂ ಇರುವ ಹಾಗೆ ಕಾಣಲಿಲ್ಲ. ಒಬ್ಬ "ಯಾರೋ ನನ್ನ ಮಣೆಯ ಮೇಲೆ ಕುಳಿತಿದ್ದ ಗುರುತು ಬಿದ್ದಿದೆ" ಎಂದು ಕೂಗಿದ. ಇನ್ನೊಬ್ಬ "ಯಾರೋ ನನ್ನ ತಟ್ಟೆಯಿಂದ ಒಂದು ಚೂರು ರೊಟ್ಟಿ ತಿಂದುಬಿಟ್ಟಿದ್ದಾರೆ" ಎಂದ. ಮತ್ತೊಬ್ಬ "ಯಾರೋ ನನ್ನ ಲೋಟದಿಂದ ಹಾಲು ಕುಡಿದುಬಿಟ್ಟಿದ್ದಾರೆ" ಎಂದು ಅರಚಿದ. ಹಾಗೆಯೇ ಒಬ್ಬೊಬ್ಬನೂ ಒಂದೊಂದು ರೀತಿ ಕೂಗಾಡಿದ್ದು ಆದ ಮೇಲೆ, ಮೊದಲನೆಯವನು ತನ್ನ ಹಾಸುಗೆಯನ್ನು ನೋಡಿ "ಯಾರೋ ನನ್ನ ಹಾಸುಗೆಯ ಮೇಲೆ ಮಲಗಿ ಸುಕ್ಕು ಮಾಡಿದ್ದಾರೆ!" ಎಂದು ಆಶ್ಚರ್ಯ ವನ್ನು ಸೂಚಿಸಿದ. ಮಿಕ್ಕವರೆಲ್ಲಾ ಓಡಿಹೋಗಿ ತಮ್ಮತಮ್ಮ ಹಾಸುಗೆ ಗಳನ್ನು ಪರೀಕ್ಷಿಸಿ "ಯಾರೋ ನಮ್ಮ ಹಾಸುಗೆಗಳ ಮೇಲೂ ಮಲಗಿದ್ದು ಹೋಗಿದ್ದಾರೆ!" ಎಂದು ಕೂಗಿದರು. ಏಳನೆಯವನು ತನ್ನ ಹಾಸುಗೆಯ ಮೇಲೆ ಮಲಗಿ ನಿದ್ದೆಮಾಡುತ್ತಿದ್ದ ಮಂಜಿನ ಮಣಿಯನ್ನು ಕಂಡು ಅಣ್ಣಂದಿರನ್ನೆಲ್ಲಾ ಅಲ್ಲಿಗೆ ಕರೆದ. ಅವರೆಲ್ಲರೂ ಅಚ್ಚರಿಯಿಂದಲೂ ಸಂತೋಷದಿಂದಲೂ ಕೂಗಾಡುತ್ತಾ ತಮ್ಮತಮ್ಮ ದೀಪಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು "ಅಹಾ! ಎಂಥಾ ಚೆಲುವೆ ಈ ಹುಡುಗಿ!" ಎಂದು ನೆಗೆದಾಡಿದರು. ಅವಳನ್ನು ನೋಡಿ ಅವರ ಹಿಗ್ಗು ಹೇಳತೀರದು. ಆದರೆ ಅವಳನ್ನು ಯಾರೂ ಎಚ್ಚರಗೊಳಿಸಲಿಲ್ಲ. ಏಳನೆಯವನಿಗೆ ಹಾಸುಗೆ ಇಲ್ಲದೆ ಹೋದುದರಿಂದ ಅವನು ತನ್ನ ಅಣ್ಣಂದಿರ ಹಾಸುಗೆಗಳ ಮೇಲೆ ಒಬ್ಬೊಬ್ಬನ ಹತ್ತಿರ ಒಂದೊಂದು ಗಂಟೆಯಂತೆ ಮಲಗಿ ರಾತ್ರಿಯನ್ನು ಕಳೆದ.

ಮಾರನೆಯ ದಿನ ಮಂಜಿನ ಮಣಿ ಅವರಿಗೆ ತನ್ನ ಕಥೆಯನ್ನೆಲ್ಲಾ ಹೇಳಿದಳು. ಅದನ್ನು ಕೇಳಿ ಅವಳ ಮೇಲೆ ಅವರಿಗೆ ಬಹಳ ಮರುಕ ಹುಟ್ಟಿತು. ಅವರು ಅವಳಿಗೆ "ನೀನು ನಮ್ಮ ಮನೆಯನ್ನು ಚೊಕ್ಕಟವಾಗಿ ಇಟ್ಟುಕೊಂಡು ಇಲ್ಲೇ ಇದ್ದುಬಿಡು. ನಮಗೆ ಅಡುಗೆ ಮಾಡಿಹಾಕಬೇಕು,

ನಮ್ಮ ಬಟ್ಟಿಗಳನ್ನು ಒಗೆಯಬೇಕು. ಇಷ್ಟು ಮಾಡುವ ಹಾಗಿದ್ದರೆ ನಾವು ನಿನ್ನನ್ನು ಯಾವ ಅಪಾಯವೂ ಬರದಂತೆ ಕಾಪಾಡುತ್ತೇವೆ" ಎಂದು ಭರವಸೆ ಕೊಟ್ಟರು. ಅವಳು ಅದಕ್ಕೆ ಒಪ್ಪಿಕೊಂಡಳು. ಅಂದಿನಿಂದ ಅವರು ಹಗಲೆಲ್ಲಾ ಬೆಳ್ಳಿ ಬಂಗಾರವನ್ನು ಹುಡುಕಲು ಕಾಡಿನಲ್ಲಿ ಎಲ್ಲಿಗೋ ಹೋಗಿಬಿಡುತ್ತಿದ್ದರು. ಮಂಜಿನ ಮಣಿ ಮನೆಗೆಲಸವನ್ನು ನೋಡಿಕೊಂಡು ಗುಡಿಸಲಿನಲ್ಲೇ ಇರುತ್ತಿದ್ದಳು. ಪ್ರತಿದಿನವೂ ಹೊರಗೆ ಹೋಗುವ ಮೊದಲು ಆ ಕುಳ್ಳರು ಅವಳಿಗೆ "ನೀನು ಇರುವ ಸ್ಥಳವನ್ನು ರಾಣಿ ಕಂಡುಹಿಡಿಯದೆ ಬಿಡುವುದಿಲ್ಲ. ಅವಳು ಇಲ್ಲಿಗೆ ಬಂದು ನಿನಗೆ ಕೇಡು ಮಾಡಿಯಾಳು. ಜೋಪಾನವಾಗಿರು. ನಮ್ಮ ಹೊರತು ಇನ್ನಾರನ್ನೂ ಒಳಕ್ಕೆ ಬಿಟ್ಟುಕೊಳ್ಳಬೇಡ" ಎಂದು ಹೇಳುತ್ತಿದ್ದರು.

ಇತ್ತ ರಾಣಿ ಮಂಜಿನ ಮಣಿ ಸತ್ತುಹೋದಳೆಂದು ನಂಬಿ ರಾಜ್ಯದಲ್ಲೆಲ್ಲಾ ತಾನೇ ಅತ್ಯಂತ ಸುಂದರಿಯೆಂದು ಮತ್ತೆ ಹೆಮ್ಮೆಪಡತೊಡಗಿದಳು. ಒಂದು ದಿನ ಅವಳು ತನ್ನ ಕನ್ನಡಿಯ ಮುಂದೆ ಹೋಗಿ ನಿಂತು "ಕನ್ನಡಿಯೆ, ನಿಜ ಹೇಳು; ರಾಜ್ಯದಲ್ಲೆಲ್ಲಾ ಹೆಚ್ಚಿನ ಸುಂದರಿ ಯಾರು?" ಎಂದು ಕೇಳಿದಳು. ಕನ್ನಡಿ "ರಾಣಿಯೆ, ಈ ರಾಜ್ಯದಲ್ಲಿ ನಿನ್ನಷ್ಟು ಸುಂದರಿ ಇನ್ನು ಯಾರೂ ಇಲ್ಲ. ಆದರೆ, ಬೆಟ್ಟಗಳ ಆಚೆ ಅರಣ್ಯದ ಮಧ್ಯದಲ್ಲಿ ಏಳು ಜನ ಕುಳ್ಳರು ಗುಡಿಸಲು ಕಟ್ಟಿಕೊಂಡು ವಾಸ ಮಾಡುತ್ತಿದ್ದಾರೆ. ಅಲ್ಲಿ ಮಂಜಿನ ಮಣಿ ತಲೆ ಮರೆಸಿಕೊಂಡಿದ್ದಾಳೆ. ಅವಳ ಸೌಂದರ್ಯ ನಿನ್ನ ಸೌಂದರ್ಯಕ್ಕಿಂತಲೂ ಹೆಚ್ಚಿನದು. ಇದಕ್ಕೆ ಸ್ವಲ್ಪವೂ ಸಂದೇಹವಿಲ್ಲ" ಎಂದು ಉತ್ತರ ಕೊಟ್ಟಿತು.

ರಾಣಿಗೆ ಬಹಳ ಗಾಬರಿಯಾಯಿತು. ಏಕೆಂದರೆ ಕನ್ನಡಿ ಯಾವಾಗಲೂ ನಿಜವನ್ನೇ ಹೇಳುತ್ತಿದ್ದಿತೆಂದು ಅವಳಿಗೆ ಚೆನ್ನಾಗಿ ಗೊತ್ತು. ತಾನು ಮಂಜಿನ ಮಣಿಯನ್ನು ಕಾಡಿನಲ್ಲಿ ಕೊಂದುಬಾರೆಂದು ಕಳುಹಿಸಿದ್ದ ಸೇವಕ ತನಗೆ ಸುಳ್ಳು ಹೇಳಿ ಮೋಸ ಮಾಡಿದ್ದನೆಂದು ಅವಳಿಗೆ ಈಗ ಹೊಳೆಯಿತು. ತನಗಿಂತಲೂ ಹೆಚ್ಚು ಚೆಲುವೆಯಾದ ಹೆಂಗಸು ಒಬ್ಬಳಾದರೂ ಬದುಕಿದ್ದಾಳೆ ಎಂಬ ವರ್ತಮಾನವನ್ನು ಕೂಡ ಅವಳು ಸಹಿಸುತ್ತಿರಲಿಲ್ಲ. ಆದ್ದರಿಂದ ಅವಳು ಸೂಜಿ, ದಾರ, ಜರತಾರಿ, ಕಸೂತಿಯ

ಬಟ್ಟೆಗಳು, ಮೊದಲಾದ ಪದಾರ್ಥಗಳನ್ನು ಮಾರುವ ಮುದುಕಿಯಂತೆ ವೇಷ ಹಾಕಿಕೊಂಡು ಬೆಟ್ಟಗಳನ್ನು ದಾಟಿ ಕುಳ್ಳರ ಗುಡಿಸಲಿನ ಕಡೆಗೆ ನಡೆದಳು. ಸ್ವಲ್ಪ ಹೊತ್ತಿನಲ್ಲೇ ಗುಡಿಸಲನ್ನು ಸಮೀಪಿಸಿ "ಸೂಜಿ, ದಾರ, ಜರತಾರಿ, ಕಸೂತಿಯ ಸಾಮಾನು!" ಎಂದು ಕೂಗಿದಳು. ಮಂಜಿನ ಮಣಿ ಇವಳ ಕೂಗನ್ನು ಕೇಳಿ ಕಿಟಕಿಯನ್ನು ತೆರೆದು, ಇಣಿಕಿ ನೋಡಿ, "ಯಾರಮ್ಮಾ ನೀನು? ಏನೇನಿದೆ ನಿನ್ನ ಹತ್ತಿರ?" ಎಂದಳು. ರಾಣಿ "ಸೊಗಸಾದ ಪದಾರ್ಥಗಳಿವೆ. ಜರತಾರಿ ಹಾಕಿದ ಕಸೂತಿ ಬಟ್ಟೆಗಳಿವೆ; ಹೊಲಿದು ತಯಾರಾಗಿರುವ ಲಂಗ ಅಂಗಿಗಳಿವೆ" ಎಂದಳು. ಮಂಜಿನ ಮಣಿ ಮನಸ್ಸಿನಲ್ಲೇ "ಪಾಪ, ಮುದುಕಿ, ಒಳ್ಳೆಯವಳಿರುವ ಹಾಗೆ ಕಾಣುತ್ತಾಳೆ" ಎಂದುಕೊಂಡು ಬಾಗಿಲು ತೆರೆದಳು. ರಾಣಿ ಅವಳನ್ನು ನೋಡುತ್ತಲೇ "ಅಯ್ಯಯ್ಯೋ, ನಿನ್ನಂಥ ಚೆಲುವೆ ಇಂಥ ಪರಿಪ್ರ ಬಟ್ಟೆಗಳನ್ನು ಉಟ್ಟಿರುವುದೆ? ತೆಗೆ, ತೆಗೆ, ಈ ಜರತಾರಿ ಅಂಗಿಯನ್ನು ತೊಡಿಸುತ್ತೇನೆ" ಎಂದು ತಾನು ತಂದಿದ್ದ ಒಂದು ಜರತಾರಿಯ ಅಂಗಿಯನ್ನು ಬಲವಂತದಿಂದ ಅವಳಿಗೆ ತೊಡಿಸಿ, ಕತ್ತಿನ ಲಾಡಿಯನ್ನು ಕಟ್ಟುವಂತೆ ನಟಿಸಿ ಲಾಡಿಯ ದಾರವನ್ನು ಬಹಳ ಬಿಗಿಯಾಗಿ ಎಳೆದಳು. ಹುಡುಗಿಯ ಕೊರಳಿಗೆ ಉರುಲು ಬಿದ್ದಂತಾಗಿ ಅವಳು ಮೂರ್ಛೆಹೋದಳು. ರಾಣಿ ಅವಳು ಸತ್ತಳೆಂದು ಭಾವಿಸಿ, "ಇನ್ನು ನಿನ್ನ ಸೌಂದರ್ಯವೆಲ್ಲಾ ಕೊನೆಮುಟ್ಟಿತು" ಎಂದು ಹೀಯಾಳಿಸಿ ಅರಮನೆಗೆ ಹಿಂದಿರುಗಿದಳು.

ಸಾಯಂಕಾಲ ಕುಳ್ಳರು ಏಳು ಜನರೂ ಗುಡಿಸಲಿಗೆ ಬಂದರು. ಮಂಜಿನ ಮಣಿ ಅಲುಗಾಡದೆ ನೆಲದ ಮೇಲೆ ಬಿದ್ದಿರುವುದನ್ನು ಕಂಡು ಅವರಿಗೆ ದುಃಖ ಉಮ್ಮಳಿಸಿ ಬಂತು. ಅವಳು ಸತ್ತೇಹೋಗಿರಬೇಕೆಂದು ತಿಳಿದು ಅವರು ಅವಳನ್ನು ಮೇಲಕ್ಕೆ ಎತ್ತಿದರು. ಆಗ ಅವಳ ಕತ್ತನ್ನು ಬಿಗಿದಿದ್ದ ಕಗ್ಗಂಟು ಅವರ ಕಣ್ಣಿಗೆ ಬಿತ್ತು. ಕೂಡಲೆ ಅವರು ಅದನ್ನು ಕತ್ತರಿಸಿದರು. ಸ್ವಲ್ಪ ಹೊತ್ತಿನಲ್ಲೇ ಅವಳು ಚೆನ್ನಾಗಿ ಉಸಿರಾಡತೊಡಗಿದಳು. ಆಮೇಲೆ ಅವಳಿಗೆ ಪೂರ್ತಿಯಾಗಿ ಪ್ರಜ್ಞೆ ಬಂತು. ಅವಳು ನಡೆದದ್ದನ್ನೆಲ್ಲಾ ಅವರಿಗೆ ತಿಳಿಸಿದಳು. ಅವರು "ಆ ಮುದುಕಿ ನಿನ್ನ ಮಲತಾಯಿಯಾದ ರಾಣಿಯೇ ಇರಬೇಕು. ಇನ್ನೊಂದು ಸಾರಿ ಬಹಳ

ಎಚ್ಚರಿಕೆಯಿಂದಿರು. ಯಾರು ಬಂದರೂ ಒಳಕ್ಕೆ ಬಿಟ್ಟುಕೊಳ್ಳಬೇಡ" ಎಂದರು.

ರಾಣಿ ಅರಮನೆಗೆ ಹಿಂತಿರುಗಿದ್ದೇ ತಡ, ತಕ್ಷಣವೇ ತನ್ನ ಕನ್ನಡಿಯ ಮುಂದೆ ನಿಂತು "ಕನ್ನಡಿಯೆ, ನಿಜ ಹೇಳು; ಈಗ ರಾಜ್ಯದಲ್ಲೆಲ್ಲಾ ಅತ್ಯಂತ ಸುಂದರಿ ಯಾರು?" ಎಂದು ಕೇಳಿದಳು. ಕನ್ನಡಿ ಮತ್ತೆ "ರಾಣಿಯೆ, ಈ ರಾಜ್ಯದಲ್ಲಿ ನಿನ್ನಷ್ಟು ಸುಂದರಿ ಇನ್ನು ಯಾರೂ ಇಲ್ಲ. ಆದರೆ, ಬೆಟ್ಟಗಳ ಆಚೆ ಅರಣ್ಯದ ಮಧ್ಯದಲ್ಲಿ ಏಳು ಜನ ಕುಳ್ಳರು ಗುಡಿಸಲು ಕಟ್ಟಿಕೊಂಡು ವಾಸಮಾಡುತ್ತಿದ್ದಾರೆ. ಅಲ್ಲಿ ಮಂಜಿನ ಮಣಿ ತಲೆ ಮರೆಸಿಕೊಂಡಿದ್ದಾಳೆ. ಅವಳ ಸೌಂದರ್ಯ ನಿನ್ನ ಸೌಂದರ್ಯಕ್ಕಿಂತಲೂ ಹೆಚ್ಚಿನದು. ಇದಕ್ಕೆ ಸ್ವಲ್ಪವೂ ಸಂದೇಹವಿಲ್ಲ" ಎಂದಿತು.

ಕನ್ನಡಿಯ ಉತ್ತರವನ್ನು ಕೇಳಿ ರಾಣಿಗೆ ಮೊದಲು ಆಶ್ಚರ್ಯವಾಯಿತು. ಅನಂತರ, ಮಂಜಿನ ಮಣಿ ಇನ್ನೂ ಬದುಕಿದ್ದಳೆಂಬುದನ್ನು ನೆನೆಸಿಕೊಂಡಾಗ, ಅವಳ ಮೈಯೆಲ್ಲಾ ಬೆಂಕಿಯಾಯಿತು. ಅವಳು ಇನ್ನೊಂದು ವೇಷ ಹಾಕಿಕೊಂಡು ಮತ್ತೆ ಹೊರಟಳು. ಅವಳ ಕೈಯಲ್ಲಿ ಒಂದು ವಿಷದ ಬಾಚಣಿಗೆ ಇತ್ತು. ಕುಳ್ಳರ ಗುಡಿಸಲನ್ನು ಸೇರಿದ ಕೂಡಲೆ ಅವಳು ಬಾಗಿಲು ತಟ್ಟಿ "ಒಳ್ಳೊಳ್ಳೆಯ ಪದಾರ್ಥಗಳಿವೆ, ಕೊಂಡುಕೊಳ್ಳುತ್ತೀರೇನಮ್ಮಾ?" ಎಂದು ಕೂಗಿದಳು. ಮಂಜಿನ ಮಣಿ ಕಿಟಕಿಯಲ್ಲಿ ನೋಡಿ "ನಾನು ಯಾರನ್ನೂ ಒಳಕ್ಕೆ ಬಿಡುವುದಿಲ್ಲ" ಎಂದುಬಿಟ್ಟಳು. ರಾಣಿ "ಚಿಂತೆಯಿಲ್ಲ. ನನ್ನ ಹತ್ತಿರ ಇರುವ ಬಾಚಣಿಗೆಗಳನ್ನಾದರೂ ನೋಡು" ಎಂದು ಕೈಯಲ್ಲಿದ್ದ ವಿಷದ ಹಣಿಗೆಯನ್ನು ಅವಳ ಕೈಗೆ ಕೊಟ್ಟಳು. ಅದು ನೋಡುವುದಕ್ಕೆ ಬಹಳ ಚೆನ್ನಾಗಿತ್ತು. ಮಂಜಿನ ಮಣಿ ಮನಸ್ಸು ತಡೆಯಲಾರದೆ ಅದರಿಂದ ಒಂದು ಸಾರಿಯಾದರೂ ತನ್ನ ಕೂದಲನ್ನು ಬಾಚಿಕೊಳ್ಳಬೇಕೆಂದು ಆಸೆಪಟ್ಟು ಅದನ್ನು ತಲೆಯ ಮೇಲೆ ಊರಿದಳು. ಹಣಿಗೆ ತಲೆಗೆ ತಗಲಿತೋ ಇಲ್ಲವೋ ಅದರಲ್ಲಿದ್ದ ವಿಷ ಅವಳ ನೆತ್ತಿಗೆ ಇಳಿಯಿತು. ಕೂಡಲೆ ಅವಳು ಮೂರ್ಛೆಬಿದ್ದಳು. ರಾಣಿ "ಅಲ್ಲೇ ಬಿದ್ದಿರು" ಎಂದು ಹೇಳಿ ಹೋದಳು. ಮಂಜಿನ ಮಣಿಯ ಅದೃಷ್ಟದಿಂದ ಕುಳ್ಳರು ಆ ದಿವಸ ಸಂಜೆ ಎಂದಿಗಿಂತಲೂ ಮುಂಚೆಯೇ ಗುಡಿಸಲಿಗೆ

ಹಿಂದಿರುಗಿ ಬಂದರು. ಮಂಜಿನ ಮಣಿ ಪ್ರಜ್ಞೆಯಿಲ್ಲದೆ ಬಿದ್ದಿರುವುದನ್ನು ನೋಡಿ ನಡೆದ ಸಂಗತಿಯನ್ನು ಅವರು ಸ್ವಲ್ಪಮಟ್ಟಿಗೆ ಊಹಿಸಿದರು. ಒಂದೆರಡು ಕ್ಷಣದಲ್ಲೇ ಅವಳ ತಲೆಯಲ್ಲಿ ಕೂದಲ ನಡುವೆ ಸೆಕ್ಕಿಕೊಂಡಿದ್ದ ವಿಷದ ಹಣಿಗೆ ಅವರಿಗೆ ಕಾಣಿಸಿತು. ಅವರು ಅದನ್ನು ಎಳೆದುಬಿಸುಟರು. ಕೂಡಲೆ ಅವಳಿಗೆ ಅರಿವು ಬಂದು ನಡೆದಿದ್ದುದನ್ನೆಲ್ಲಾ ಅವರಿಗೆ ತಿಳಿಸಿದಳು. ಅವರು ಯಾರು ಬಂದರೂ ಬಾಗಿಲು ತೆರೆಯಕೂಡದೆಂದು ಮತ್ತೊಂದು ಸಾರಿ ಅವಳಿಗೆ ಬುದ್ಧಿ ಹೇಳಿದರು.

ಇತ್ತ ರಾಣಿ ತನ್ನ ಕನ್ನಡಿಯ ಮುಂದೆ ಹೋಗಿ ನಿಂತು ಹಿಂದಿನಂತೆಯೇ ಪ್ರಶ್ನೆ ಕೇಳಿದಳು. ಕನ್ನಡಿ ಹಿಂದಿನಂತೆಯೇ ಉತ್ತರ ಹೇಳಿತು. ಕೋಪದಿಂದ ಅವಳ ಮೈ ತರತರ ನಡುಗಿತು. ಅವಳು ಹಲ್ಲು ಕಚ್ಚಿ, ಹುಬ್ಬು ಗಂಟುಹಾಕಿಕೊಂಡು, "ಇದರ ಫಲವಾಗಿ ನಾನೇ ಸತ್ತರೂ ಚಿಂತೆಯಿಲ್ಲ! ಮಂಜಿನ ಮಣಿಯನ್ನು ಸಾಯಿಸಲೇಬೇಕು!" ಎಂದು ಕಿರಿಚುತ್ತಾ ತನ್ನ ಕೋಣೆಗೆ ಓಡಿದಳು. ಅಲ್ಲಿ ಅವಳು ಒಂದು ವಿಷ ತುಂಬಿದ ಮಾವಿನಹಣ್ಣನ್ನು ಸಿದ್ಧಮಾಡಿದಳು. ಅದು ಹೊರಗಡೆ ಹಚ್ಚಗೆ ಮೃದುವಾಗಿ ಹೊಳೆಯುತ್ತಿತ್ತು. ಗಟ್ಟಿಯಾಗಿ ಮುಟ್ಟಿದರೆ ಸಾಕು, ರಸ ಹೊರಕ್ಕೆ ಹರಿದುಬಂದುಬಿಡುತ್ತದೆಯೇನೋ ಎನ್ನುವಂತಿತ್ತು. ಅದನ್ನು ನೋಡಿದವರಲ್ಲಿ ಇದನ್ನು ತಿನ್ನಲೇಬೇಕು ಎನ್ನುವ ಆಸೆಯುಂಟಾಗುತ್ತಿತ್ತು. ಆದರೆ ಅದನ್ನು ಮೂಲೆಯ ಕಡೆ ಕಚ್ಚಿದವರು ಸಾಯುವುದು ಖಂಡಿತ ವಾಗಿತ್ತು. ತೊಟ್ಟಿನ ಕಡೆ ಮಾತ್ರ ವಿಷವಿರಲಿಲ್ಲ. ಈ ಹಣ್ಣನ್ನು ತಯಾರಿಸಿದ ನಂತರ ರಾಣಿ ಒಬ್ಬ ಬೇಸಾಯಗಾರನ ಹೆಂಡತಿಯಂತೆ ವೇಷ ಧರಿಸಿ ಬೆಟ್ಟಗಳನ್ನೆಲ್ಲಾ ದಾಟಿ ಕುಳ್ಳರ ಗುಡಿಸಲಿಗೆ ಬಂದು ಬಾಗಿಲು ತಟ್ಟಿದಳು. ಮಂಜಿನ ಮಣಿ ಕಿಟಕಿಯಲ್ಲಿ ಬಗ್ಗಿ ನೋಡಿ "ನಾನು ಯಾರನ್ನೂ ಒಳಕ್ಕೆ ಬಿಟ್ಟುಕೊಳ್ಳುವುದಿಲ್ಲ. ಯಾರಿಗೂ ಬಾಗಿಲು ತೆಗೆಯ ಕೂಡದೆಂದು ಕುಳ್ಳರು ಹೇಳಿ ಹೋಗಿದ್ದಾರೆ" ಎಂದಳು. ರಾಣಿ ಇದಕ್ಕೆ "ನಿನ್ನ ಇಷ್ಟ ಬಂದ ಹಾಗೆ ಮಾಡು. ಆದರೆ ಈ ಮಾವಿನ ಹಣ್ಣನ್ನಾದರೂ ತೆಗೆದುಕೊ. ನೀನು ಇದನ್ನು ತಿನ್ನಬೇಕೆಂದು ನನಗೆ ಆಸೆ" ಎಂದಳು. ಮಂಜಿನ ಮಣಿ "ಬೇಡ, ನಾನು ತಿನ್ನುವುದಿಲ್ಲ; ನನಗೆ ಹೆದರಿಕೆ

ಯಾಗುತ್ತದೆ" ಎಂದಳು. ರಾಣಿ "ಅಯ್ಯೋ ಪೆದ್ದು ಹುಡುಗಿ! ನೀನೇಕೆ ಹೀಗೆ ಹೆದರುತ್ತೀಯೆ! ಇದರಲ್ಲೇನಾದರೂ ವಿಷ ಇದೆಯೆಂದು ಅನುಮಾನ ವೇನು? ಬಾ, ಬೇಕಾದರೆ ನಾನೊಂದು ಕಡೆ ತಿನ್ನುತ್ತೇನೆ, ನೀನೊಂದು ಕಡೆ ತಿನ್ನು" ಎಂದು ವಿಷ ಇಲ್ಲದ ತೊಟ್ಟಿನ ಕಡೆಯ ಭಾಗವನ್ನು ತನ್ನ ಬಾಯಲ್ಲಿಟ್ಟುಕೊಂಡು ಕಚ್ಚಿದಳು. ಅವಳಿಗೆ ಏನೂ ಆಗಲಿಲ್ಲ. ಇದನ್ನು ನೋಡಿ ಮಂಜಿನ ಮಣಿಗೆ ತಾನೂ ಅದನ್ನು ತಿನ್ನಬೇಕೆಂಬ ಅಪೇಕ್ಷೆ ಬಲವಾಯಿತು. ಅವಳು ಅದನ್ನು ಕೈಗೆ ತೆಗೆದುಕೊಂಡು ಮೂತಿಯ ಕಡೆಯ ಭಾಗವನ್ನು ಬಾಯೊಳಗಿಟ್ಟುಕೊಂಡು ಕಚ್ಚಿದಳು. ಕಚ್ಚಿದ ಕೂಡಲೆ ದೊಪ್ಪನೆ ಸತ್ತುಬಿದ್ದಳು. ರಾಣಿ ಸಂತೋಷದಿಂದ ಕಣ್ಣು ಹಾರಿಸುತ್ತಾ "ಇನ್ನು ಯಾರು ಏನು ಮಾಡಿದರೂ ನಿನ್ನನ್ನು ಬದುಕಿಸಲಾರರು" ಎಂದು ಹೊರಟುಹೋದಳು. ಈಸಾರಿ ರಾಣಿ ತನ್ನ ಕನ್ನಡಿಯ ಮುಂದೆ ನಿಂತು ಪ್ರಶ್ನೆ ಕೇಳಿದಾಗ ಅದು "ರಾಣಿಯೆ, ಜಗತ್ತಿನಲ್ಲೆಲ್ಲಾ ನಿನ್ನಂತಹ ಚೆಲುವೆ ಇನ್ನು ಯಾರೂ ಇಲ್ಲ" ಎಂದಿತು. ರಾಣಿಗೆ ನಿಶ್ಚಿಂತೆಯಾಯಿತು.

ಸಾಯಂಕಾಲ ಕುಳ್ಳರು ಗುಡಿಸಲಿಗೆ ಬಂದೊಡನೆ ಮಂಜಿನ ಮಣಿ ಉಸಿರಾಡದೆ ಬಿದ್ದಿದ್ದುದನ್ನು ಕಂಡರು. ಅವಳು ಪೂರ್ತಿಯಾಗಿ ಸತ್ತು ಹೋಗಿದ್ದಳೆಂದು ಅವರಿಗೆ ಕೂಡಲೆ ಅರ್ಥವಾಗಲಿಲ್ಲ. ಅದ್ದರಿಂದ ಅವರು ಅವಳನ್ನು ಮೇಲಕ್ಕೆತ್ತಿ, ಅವಳ ತಲೆಯ ಕೂದಲನ್ನು ಚೊಕ್ಕಟವಾಗಿ ಬಾಚಿ, ಅವಳ ಮುಖವನ್ನು ಹಾಲಿನಿಂದಲೂ ತಣ್ಣನೆಯ ನೀರಿನಿಂದಲೂ ತೊಳೆದರು. ಆದರೆ ಹೋಗಿದ್ದ ಅವಳ ಜೀವ ಹಿಂದಿರುಗಿ ಬರಲಿಲ್ಲ. ಆದ್ದರಿಂದ ಅವಳನ್ನು ಒಂದು ಹಾಸುಗೆಯ ಮೇಲೆ ಮಲಗಿಸಿ, ಏಳು ಜನರೂ ಮೂರು ದಿನ ಹಗಲು ರಾತ್ರಿ ಎನ್ನದೆ ಒಂದೇ ಸಮನೆ ಅತ್ತು ಗೋಳಾಡಿದರು. ಅನಂತರ ಅವಳ ದೇಹವನ್ನು ಹೂಳಬೇಕೆಂಬ ಯೋಚನೆ ಅವರಲ್ಲಿ ಮೂಡಿತು. ಆದರೆ ಅವಳ ಮುಖವನ್ನು ನೋಡಿದಂತೆಲ್ಲಾ ಅವಳನ್ನು ಮಣ್ಣಿನಲ್ಲಿ ಹೂಳುವುದಕ್ಕೆ ಅವರಿಗೆ ಮನಸ್ಸು ಬರಲಿಲ್ಲ. ಪ್ರಾಣ ಹೋಗಿ ಮೂರು ದಿವಸಗಳಾಗಿದ್ದರೂ ಅವಳ ಮುಖ ಸ್ವಲ್ಪವೂ ಬದಲಾಯಿಸಿರಲಿಲ್ಲ. ಅದು ಮೊದಲಿನಂತೆಯೇ ಮೃದುವಾಗಿ ಮನೋಹರವಾಗಿ ಸುಂದರವಾಗಿತ್ತು. ಇಂಥ ಚೆಲುವೆಯಾದ ಕೋಮಲೆಯನ್ನು ಮಣ್ಣಿನ

ಪಾಲು ಮಾಡುವುದಕ್ಕೆ ಯಾರ ಮನಸ್ಸು ತಾನೇ ಒಪ್ಪುತ್ತದೆ? ಆದಕಾಗಣ ಅವರು ಕಾಡಿನಲ್ಲಿದ್ದ ಶ್ರೀಗಂಧದ ಮರವನ್ನು ತಂದು ಸೊಗಸಾದ, ನಯವಾದ, ಸುವಾಸನೆಯಿಂದ ಕೂಡಿದ ಒಂದು ಪೆಟ್ಟಿಗೆಯನ್ನು ಮಾಡಿದರು. ಅದರ ತುಂಬ ಬಗೆಬಗೆಯ ಹೂಗಳನ್ನು ಹಾಸಿ ಅವಳನ್ನು ಅದರಲ್ಲಿ ಮಲಗಿಸಿದರು. ಬೇಕುಬೇಕಾದಾಗಲೆಲ್ಲಾ ಪೆಟ್ಟಿಗೆಯ ಬಾಗಿಲನ್ನು ತೆರೆದು ಅವಳ ಮುಖವನ್ನು ನೋಡಬಹುದೆಂಬುದೇ ಅವರ ಆಸೆಯಾಗಿತ್ತು. ಅನಂತರ ಅವರು ಪೆಟ್ಟಿಗೆಯ ಮೇಲೆ ಬಂಗಾರದ ಬಣ್ಣದಲ್ಲಿ ಅವಳ ಹೆಸರನ್ನು ಮುದ್ದಾದ ಅಕ್ಷರಗಳಲ್ಲಿ ಬರೆದರು. ಹೆಸರಿನ ಕೆಳಗೆ ಅವಳೊಬ್ಬ ರಾಜನ ಮಗಳೆಂಬ ಮಾತನ್ನೂ ಸೇರಿಸಿದರು. ಇದಾದ ಮೇಲೆ ಎಲ್ಲರೂ ಸೇರಿ ಆ ಪೆಟ್ಟಿಗೆಯನ್ನು ಬೆಟ್ಟದ ತುದಿಗೆ ಎತ್ತಿಕೊಂಡುಹೋಗಿ ಅಲ್ಲಿ ತಂಪಾದ ಒಂದು ಸ್ಥಳದಲ್ಲಿ ಅದನ್ನು ಇಟ್ಟರು. ಹಗಲು ರಾತ್ರಿ ಸದಾ ಅವರಲ್ಲಿ ಯಾರಾದರೂ ಒಬ್ಬನು ಅದರ ಪಕ್ಕದಲ್ಲೇ ಕಾವಲಿರುತ್ತಿದ್ದ. ಕಾಡಿನ ಹಕ್ಕಿಗಳೆಲ್ಲಾ ಒಂದೊಂದಾಗಿ ಅಲ್ಲಿಗೆ ಬಂದು ಪೆಟ್ಟಿಗೆಯ ಸುತ್ತಲೂ ಸದ್ದು ಮಾಡದೆ ಸುಮ್ಮನೆ ಕಣ್ಣೀರು ಸುರಿಸುತ್ತಿದ್ದವು.

ಹೀಗೆ ಬಹಳ ಕಾಲ ಕಳೆಯಿತು. ಆದರೂ ಮಂಜಿನ ಮಣಿಯ ದೇಹ ಸ್ವಲ್ಪವೂ ಕೆಡಲಿಲ್ಲ. ಅವಳು ಇನ್ನೂ ನಿದ್ದೆ ಮಾಡುತ್ತಿದ್ದಳೋ ಎನ್ನುವಂತೆ ಕಾಣುತ್ತಿದ್ದಳು. ಈಗಲೂ ಕೂಡ ಅವಳ ಕೂದಲು ಕರಿಯ ಮರದಂತೆ ಕಪ್ಪಗಿತ್ತು, ಅವಳ ಚರ್ಮ ಮಂಜಿನಂತೆ ಬೆಳ್ಳಗೆ ಮೃದುವಾಗಿತ್ತು, ಅವಳ ಕೆನ್ನೆ ರಕ್ತದಂತೆ ಕೆಂಪಗಿತ್ತು. ಕಡೆಗೆ, ಒಂದು ದಿವಸ ಒಬ್ಬ ರಾಜಕುಮಾರ ಕಳ್ಳರ ಗುಡಿಸಲಿಗೆ ಬಂದ. ಅವನು ಬೆಟ್ಟದ ಮೇಲಿದ್ದ ಗಂಧದ ಪೆಟ್ಟಿಗೆಯನ್ನೂ ಅದರೊಳಗಿದ್ದ ಮಂಜಿನ ಮಣಿಯನ್ನೂ ನೋಡಿದ. ಪೆಟ್ಟಿಗೆಯ ಮೇಲಿನ ಅಕ್ಷರಗಳನ್ನು ಓದಿ ಅವಳ ಹೆಸರನ್ನೂ ಅವಳು ಯಾರು ಎಂಬುದನ್ನೂ ತಿಳಿದುಕೊಂಡ. ಅವನಿಗೆ ಅವಳ ಮೇಲೆ ಪ್ರೀತಿ ಹುಟ್ಟಿತು. ಅವನು ಅವಳನ್ನು ತನಗೆ ಕೊಡಬೇಕೆಂದು ಕುಳ್ಳರನ್ನು ಬೇಡಿ, ಅವರು ಕೇಳಿದಷ್ಟು ಹಣವನ್ನು ಕೊಡುವುದಾಗಿ ಹೇಳಿದ. ಅವರು ಮೊದಲು ಒಪ್ಪಲಿಲ್ಲ. ಪ್ರಪಂಚದಲ್ಲಿರುವ ಐಶ್ವರ್ಯವನ್ನೆಲ್ಲಾ ಕೊಟ್ಟರೂ ಅವಳನ್ನು ಕೊಡುವುದಿಲ್ಲವೆಂದು ಹೇಳಿದರು. ಆದರೆ ಅವರು

ಎಷ್ಟು ಇಲ್ಲವೆಂದರೂ ಸುಮ್ಮನಾಗದೆ ಅವನು ಅಂಗಲಾಚಿ ಬೇಡಿಕೊಂಡ. ಇದನ್ನು ಕಂಡು ಅವರಿಗೆ ಮರುಕವುಂಟಾಗಿ ಅವಳನ್ನು ಅವನಿಗೆ ಕೊಡಲು ಒಪ್ಪಿದರು. ರಾಜಕುಮಾರ ಪೆಟ್ಟಿಗೆಯನ್ನು ಭುಜದ ಮೇಲಿಟುಕೊಳ್ಳು ವುದಕ್ಕೆಂದು ಎರಡು ಕೈಗಳಿಂದಲೂ ಹಿಡಿದು ಮೇಲಕ್ಕೆ ಎತ್ತಿದ. ಅವನು ಹಾಗೆ ಎತ್ತಿದ ಕೂಡಲೆ ಮಂಜಿನ ಮಣಿಯ ಬಾಯಿಯಿಂದ ಅವಳು ಕಚ್ಚಿದ್ದ ಮಾವಿನಹಣ್ಣಿನ ಚೂರು ಹೊರಕ್ಕೆ ಉದುರಿತು. ಅವಳು ಒಳಗಿನಿಂದಲೇ "ಅಯ್ಯೋ! ನಾನು ಎಲ್ಲಿದ್ದೇನೆ?" ಎಂದು ಕಿರಿಚಿಕೊಂಡಳು. ರಾಜ ಕುಮಾರ ಪೆಟ್ಟಿಗೆಯನ್ನು ಮತ್ತೆ ಕೆಳಗಿಳಿಸಿ ಬಾಗಿಲು ತೆಗೆದು ಮೆಲ್ಲಗೆ ಅವಳನ್ನು ಹೊರಕ್ಕೆ ಎತ್ತಿದ. "ಹೆದರಬೇಡ, ನನ್ನಿಂದ ನಿನಗೆ ಯಾವ ಹಾನಿಯೂ ಆಗದು" ಎಂದು ಧೈರ್ಯ ಹೇಳಿ, ಅನಂತರ ನಡೆದಿದ್ದುದ ನ್ನೆಲ್ಲಾ ಅವಳಿಗೆ ತಿಳಿಸಿದ. "ನಾನು ನಿನ್ನನ್ನು ಎಲ್ಲಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ. ನನ್ನ ಜೊತೆಯಲ್ಲಿ ನಮ್ಮ ಊರಿಗೆ ಬಾ. ಅಲ್ಲಿ ನಿನ್ನನ್ನು ಮದುವೆಯಾಗುತ್ತೇನೆ" ಎಂದ. ಮಂಜಿನ ಮಣಿ ಇದಕ್ಕೆ ಒಪ್ಪಿ ಅವನ ಸಂಗಡ ಹೋದಳು. ಅವರಿಬ್ಬರ ಮದುವೆ ಬಹಳ ವೈಭವದಿಂದ ನಡೆಯಿತು.

ಮಂಜಿನ ಮಣಿಯ ಶತ್ರುವಾದ ಅವಳ ಮಲತಾಯಿ ಮದುಮಗನಿಗೆ ದೂರದ ಸಂಬಂಧಿ. ಆದ್ದರಿಂದ ಮದುವೆಗೆ ಅವಳನ್ನೂ ಕರೆದಿದ್ದರು. ಅವಳು ಅಲ್ಲಿಗೆ ಹೊರಡುವ ಮುಂಚೆ ಕೋಣೆಗೆ ಹೋಗಿ, ತನ್ನ ಕನ್ನಡಿಯ ಮುಂದೆ ನಿಂತು "ಕನ್ನಡಿಯೆ, ನಿಜ ಹೇಳು; ದೇಶದಲ್ಲೆಲ್ಲಾ ಅತ್ಯಂತ ಚೆಲುವೆ ಯಾರು?" ಎಂದು ಕೇಳಿದಳು. ಕನ್ನಡಿ "ರಾಣಿಯೆ, ಇಲ್ಲಿರುವ ಹೆಂಗಸರಲ್ಲಿ ನೀನೇ ಎಲ್ಲರಿಗಿಂತಲೂ ಚೆಲುವೆಯಾದವಳು. ಆದರೆ ಹೊಸ ಮದುವಣಗಿತ್ತಿ, ಮಂಜಿನ ಮಣಿ, ನಿನಗಿಂತಲೂ ಹೆಚ್ಚು ಚೆಲುವೆ" ಎಂದಿತು.

ಇದನ್ನು ಕೇಳುತ್ತಲೇ ರಾಣಿಗೆ ದೇಹವೆಲ್ಲಾ ಛಿದ್ರಛಿದ್ರವಾಗುವ ಹಾಗಾಯಿತು. ಆದರೂ ಕನ್ನಡಿ ಹೇಳಿದ ಮಾತು ನಿಜವೋ ಸುಳ್ಳೋ ತಿಳಿಯಬೇಕೆಂದು ಅವಳು ಮದುವೆಯ ಮನೆಗೆ ಹೋದಳು. ಅಲ್ಲಿ ಮದುಮಗಳು ಮಂಜಿನ ಮಣಿಯೇ ಎಂದು ಅವಳಿಗೆ ಖಂಡಿತವಾಯಿತು.

ಅವಳ ಕೋಪ ತಡೆಯಿಲ್ಲದೆ ಉಕ್ಕಿತು. ಅದೇ ಕಾರಣದಿಂದ ಅವಳಿಗೆ ಕಾಯಿಲೆಯೂ ಬಂದು ಒಂದೆರಡು ದಿನಗಳಲ್ಲೇ ಅವಳು ಸತ್ತುಹೋದಳು. ಮಂಜಿನ ಮಣಿಯೂ ಅವಳ ಗಂಡನೂ ಅನೇಕ ವರ್ಷಗಳು ಬಹಳ ಸುಖವಾಗಿ ಬಾಳಿದರು.

---

# ಅಣ್ಣಯ್ಯನ ಅದೃಷ್ಟ

ಅಣ್ಣಯ್ಯ ತನ್ನ ಯಜಮಾನನ ಕೈಕೆಳಗೆ ಒಂದೇ ಸಮನೆ ಏಳು ವರ್ಷ ಚಾಕರಿ ಮಾಡಿ ಸಾಕಾಗಿದ್ದ. ಕಡೆಗೆ ಒಂದು ದಿನ ಆತನ ಹತ್ತಿರ ಹೋಗಿ, "ಯಜಮಾನರೆ, ನಾನು ಗೊತ್ತುಮಾಡಿಕೊಂಡಿದ್ದ ಗಡು ಮುಗಿಯಿತು. ಊರಿಗೆ ಹೋಗಿ ನಮ್ಮ ಅಮ್ಮನನ್ನು ನೋಡಬೇಕು ಎನ್ನಿಸುತ್ತದೆ. ನನಗೆ ಬರಬೇಕಾದ ಕೂಲಿ ಕೊಟ್ಟುಬಿಡಿ" ಎಂದ. ಯಜಮಾನ "ನೀನು ಬಹಳ ಒಳ್ಳೆಯ ಸೇವಕನಾಗಿದ್ದೆ. ಇದ್ದಷ್ಟು ದಿನವೂ ಬಹಳ ನಂಬಿಕೆಯಿಂದ ಕೆಲಸ ಮಾಡಿದೆ. ನಿನ್ನ ಸಂಬಳವೂ ಅದಕ್ಕೆ ತಕ್ಕ ಹಾಗೆಯೇ ಇರಬೇಕು" ಎಂದು ಹೇಳಿ, ಒಂದು ಬೆಳ್ಳಿಯ ಉಂಡೆಯನ್ನು ತಂದು ಅವನ ಕೈಗೆ ಕೊಟ್ಟ. ಆ ಉಂಡೆ ಅವನ ತಲೆಯ ಗಾತ್ರ ಇತ್ತು.

ಅಣ್ಣಯ್ಯ ತಲೆಗೆ ಸುತ್ತಿದ್ದ ಚೌಕವನ್ನು ಬಿಚ್ಚಿ ಅದರೊಳಗೆ ಆ ಬೆಳ್ಳಿಯ ಉಂಡೆಯನ್ನು ಕಟ್ಟಿ, ಗಂಟನ್ನು ಹೆಗಲ ಮೇಲೆ ಹಾಕಿಕೊಂಡು ಊರ ಕಡೆಗೆ ದಾರಿ ಹಿಡಿದು ಹೊರಟ. ಸ್ವಲ್ಪ ದೂರ ಹೋಗುವುದರೊಳಗೆ ಅವನ ಕಾಲು ಸೋತುಹೋಗಿ ಬೆವರು ಕಿತ್ತುಕೊಂಡಿತು. ಅವನು ಹಾಗೆಯೇ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತಾ ನಿಧಾನವಾಗಿ ನಡೆಯುತ್ತಿರಲು ಎದುರಿಗೆ ಕುದುರೆಯ ಮೇಲೆ ಕುಳಿತು ಸಂತೋಷದಿಂದ ಸಿಳ್ಳು ಹಾಕುತ್ತ ಒಬ್ಬನು ಬಂದ. ಅವನನ್ನು ನೋಡಿ ಅಣ್ಣಯ್ಯ ಗಟ್ಟಿಯಾಗಿ "ಅಹಾ! ಕುದುರೆಯ ಮೇಲೆ ಸವಾರಿ ಮಾಡುವುದು ಎಂಥ ಸೊಗಸಾದ ಕೆಲಸ! ಅಲ್ಲಿ ನೋಡು ಆತನನ್ನು, ಹೇಗೆ ಮನೆಯಲ್ಲಿ ಜಗಲಿಯ ಮೇಲೆ ಕುಳಿತ ಹಾಗೆ ಕುಳಿತಿದ್ದಾನೆ! ಅವನೇನು ನನ್ನ ಹಾಗೆ ಮುಳ್ಳು ತುಳಿಯಬೇಕೆ? ಕಲ್ಲು ಎಡವಬೇಕೆ? ಕೆರಗಳನ್ನು ಸವೆಸಬೇಕೆ? ದೊರೆಯ ಹಾಗೆ ಹೋಗುತ್ತಾ ಇದ್ದಾನೆ!" ಎಂದ. ಕುದುರೆಯ ಮೇಲಿದ್ದವನಿಗೆ ಇದು

ಕೇಳಿಸಿತು. ಅವನು "ಏನಪ್ಪಾ ಅಣ್ಣಯ್ಯಾ, ಏಕೆ ನಡೆದುಕೊಂಡು ಹೋಗುತ್ತಿರುವೆಯಲ್ಲಾ?" ಎಂದು ಕೇಳಿದ. ಅಣ್ಣಯ್ಯ "ಏನು ಮಾಡಲಪ್ಪಾ? ಹೆಗಲ ಮೇಲೆ ಇದು ಬೇರೆ ಭಾರ ಕೂತಿದೆ! ತಲೆ ಎತ್ತುವುದಕ್ಕೂ ಕೂಡ ಆಗುವುದಿಲ್ಲ. ಭುಜವೆಲ್ಲಾ ನೋಯುತ್ತಾ ಇದೆ" ಎಂದ. ಕುದುರೆಯವನು "ಹಾಗಾದರೆ ಅದಲುಬದಲು ಮಾಡುವುದಕ್ಕೆ ಏನು ಹೇಳುವೆ? ನಾನು ನನ್ನ ಕುದುರೆಯನ್ನು ನಿನಗೆ ಕೊಡುತ್ತೇನೆ. ನೀನು ನಿನ್ನ ಬೆಳ್ಳಿಯ ಉಂಡೆಯನ್ನು ಕೊಡಬೇಕು" ಎಂದ. "ಸದ್ಯ, ಅಷ್ಟಾದರೆ ಸಾಕು. ತೆಗೆದುಕೋ, ಮಹರಾಯ!" ಎನ್ನುತ್ತಾ ಅಣ್ಣಯ್ಯ ಅವನಿಗೆ ಬೆಳ್ಳಿಯ ಉಂಡೆಯನ್ನು ಕೊಟ್ಟ. ಅವನು ಇಳಿದು ಅಣ್ಣಯ್ಯನನ್ನು ಕುದುರೆಯ ಮೇಲೆ ಕೂಡಿಸಿ, "ನಿನಗೆ ಜೋರಾಗಿ ಹೋಗಬೇಕು ಎನ್ನಿಸಿದಾಗ ಬಾಯಿ ಚಪ್ಪರಿಸಿ 'ಹೈ! ಹೈ!' ಎನ್ನು" ಎಂದು ಹೇಳಿಕೊಟ್ಟು ಹೊರಟುಹೋದ.

ಕುದುರೆಯ ಮೇಲೆ ಕುಳಿತು ಸವಾರಿ ಮಾಡಿಕೊಂಡು ಹೋದ ಹಾಗೆಲ್ಲಾ ಅಣ್ಣಯ್ಯನ ಸಂತೋಷ ಹೆಚ್ಚಿತು. ಸ್ವಲ್ಪ ಹೊತ್ತಿನಲ್ಲೇ ಅವನಿಗೆ ಇನ್ನೂ ಜೋರಾಗಿ ಹೋಗಬೇಕು ಎನ್ನಿಸಿತು. ಆದ್ದರಿಂದ ಅವನು ಬಾಯಿ ಚಪ್ಪರಿಸಿ "ಹೈ! ಹೈ!" ಎಂದು ಒಂದು ಸಾರಿ ಕೂಗಿದ. ಕೂಗಿದನೋ ಇಲ್ಲವೋ ಕುದುರೆ ನಾಗಾಲೋಟದಲ್ಲಿ ಓಡಿತು. ಅಣ್ಣಯ್ಯನ ತಲೆ ಗಿರ್ರನೆ ತಿರುಗಲಾರಂಭಿಸಿತು. ಅವನಿಗೆ ದಿಕ್ಕು ತೋಚದಂತಾಯಿತು. ಏನು ಮಾಡಬೇಕೆಂದು ಯೋಚಿಸುವಷ್ಟರಲ್ಲೇ ಅವನು ರಸ್ತೆಯ ಪಕ್ಕದಲ್ಲಿದ್ದ ಹಳ್ಳಕ್ಕೆ ಬಿದ್ದಿದ್ದ. ಅವನನ್ನು ಕೆಡವಿ ಕುದುರೆ ಓಡಿಹೋಗುತ್ತಿತ್ತು. ಆದರೆ ಅಷ್ಟರಲ್ಲಿ ಒಬ್ಬ ಗೊಲ್ಲ ಒಂದು ಹಸುವಿನೊಡನೆ ಆಕಡೆ ಬರುತ್ತಿದ್ದ. ಅವನು ಕುದುರೆಯನ್ನು ತಡೆದು ನಿಲ್ಲಿಸಿದ.

ಒಂದೆರಡು ನಿಮಿಷದಲ್ಲೇ ಅಣ್ಣಯ್ಯ ಮೇಲಕ್ಕೆದ್ದು ನಿಂತು ಮೈಕೈಗಳನ್ನೆಲ್ಲಾ ಕೊಡವಿಕೊಂಡ. ಅವನಿಗೆ ಕುದುರೆಯ ಮೇಲೆ ತಡೆಯಲಾರದಷ್ಟು ರೇಗಿ ಹೋಗಿತ್ತು. ಅವನು ಆ ಗೊಲ್ಲನನ್ನು ನೋಡಿ "ಇಂಥ ಕುದುರೆಯ ಮೇಲೆ ಸವಾರಿ ಮಾಡುವುದು ಯಾರಿಗೂ ಬೇಡ. ತಲೆ ಒಡೆಯುವ ಹಾಗೆ ಕೆಳಕ್ಕೆ ಕೆಡವಿ ಓಡಿ ಹೋಗುತ್ತದೆ. ಇದರ ಮನೆ

ಹಾಳಾಗಲಿ! ಇದಕ್ಕಿಂತಲೂ ನಿನ್ನ ಹಸು ಎಷ್ಟೋ ಉತ್ತಮ. ಹಾಯಂತ ಅದರ ಹಿಂದೆ ನಿಧಾನವಾಗಿ ನಡೆದುಕೊಂಡು ಹೋಗಬಹುದು. ಜೊತೆಗೆ ಪ್ರತಿದಿನವೂ ಹಾಲು ಮೊಸರು ಬೆಣ್ಣೆ ಬೇರೆ ದೊರೆಯುತ್ತದೆ. ಇಂತಹದೊಂದು ಹಸು ನನಗೆ ಸಿಕ್ಕರೆ ಏನು ಬೇಕೆಂದರೂ ಕೊಟ್ಟೇನು!" ಎಂದ. ಗೊಲ್ಲ "ನಿನಗೆ ಹಸುವಿನ ಮೇಲೆ ಅಷ್ಟು ಇಷ್ಟವಿದ್ದರೆ ನಿನ್ನ ಕುದುರೆಯನ್ನು ನನಗೆ ಕೊಡು, ನನ್ನ ಹಸುವನ್ನು ನೀನು ತೆಗೆದುಕೊ" ಎಂದ. ಅಣ್ಣಯ್ಯ "ಒಪ್ಪಿದೆ" ಎಂದ. ಗೊಲ್ಲ ಕುದುರೆಯ ಮೇಲಕ್ಕೆ ನೆಗೆದು ಕುಳಿತುಕೊಂಡು ಒಂದೇ ಏಟಿಗೆ ಓಡಿಹೋದ.

ಅಣ್ಣಯ್ಯ ಹಸುವಿನ ಹಿಂದೆ ಮೌನವಾಗಿ ನಡೆದುಕೊಂಡು ಹೋಗತೊಡಗಿದ. "ಎಂಥ ಲಾಭ ಸಂಪಾದಿಸಿದೆ!" ಎಂದು ಅವನಿಗೆ ಆಗುತ್ತಿದ್ದ ಸಂತೋಷ ಅಷ್ಟಿಷ್ಟಲ್ಲ. "ನಾನು ಒಳ್ಳೆ ಅದೃಷ್ಟವಂತ!" ಎಂದುಕೊಂಡು ಮುಂದೆ ನಡೆದ. "ಒಂದು ಚೂರು ರೊಟ್ಟಿ ಇದ್ದರೆ ನನಗೆ ಇನ್ನೇನೂ ಬೇಡ. ಬೇಕು ಬೇಕಾದಾಗಲೆಲ್ಲಾ ಅದರ ಜೊತೆಗೆ ಬೆಣ್ಣೆ ತಿಂದು ಹಾಲು ಕುಡಿಯಬಹುದು" ಎಂದುಕೊಂಡ.

ದಾರಿಯಲ್ಲಿ ಒಂದು ಅಂಗಡಿ ಇತ್ತು. ಅಲ್ಲಿ ಸ್ವಲ್ಪ ಮಿಠಾಯಿ ಕೊಂಡು ತಿಂದು ಅಣ್ಣಯ್ಯ ತನ್ನ ಹತ್ತಿರ ಇದ್ದ ಕಾಸನ್ನೆಲ್ಲಾ ಖರ್ಚು ಮಾಡಿಬಿಟ್ಟ. ಅಲ್ಲಿಂದ ತನ್ನ ತಾಯಿಯಿದ್ದ ಹಳ್ಳಿಯ ದಿಕ್ಕಿಗೆ ಹಸುವನ್ನು ತಿರುಗಿಸಿದ. ದಾರಿಯಲ್ಲಿ ಬಿಸಿಲು ಬಹಳವಾಯಿತು. ಊರು ಇನ್ನೂ ಬಹಳ ದೂರವಿತ್ತು. ಅಣ್ಣಯ್ಯನ ನಾಲಗೆ ಗಂಟಲು ಎಲ್ಲಾ ಒಣಗಿಹೋದವು. "ಇದಕ್ಕೇಕೆ ಇಷ್ಟು ಯೋಚನೆ? ನನ್ನ ಹಸು ಇದೆಯಲ್ಲಾ!" ಎಂದುಕೊಂಡು ಅವನು ಅದರ ಕೆಚ್ಚಲಿಗೆ ತನ್ನ ಬಾಯನ್ನೇ ಒಡ್ಡಿ ಹಿಂಡತೊಡಗಿದ. ಒಂದು ತೊಟ್ಟೂ ಹಾಲು ಬರಲಿಲ್ಲ.

ಅಣ್ಣಯ್ಯ ನಾಲ್ಕಾರು ನಿಮಿಷ ಹೀಗೆಯೇ ಹಿಂಡುತ್ತಾ ಬಾಯಿ ಬಿಟ್ಟುಕೊಂಡು ಸಪ್ಪೆ ಮೋರೆ ಹಾಕಿಕೊಂಡು ಕುಳಿತಿದ್ದ. ಹಸು ಒಂದು ಸಾರಿ ಕಾಲೆತ್ತಿ ಅವನ ತಲೆಗೆ ಝಾಡಿಸಿತು. ಪಾಪ! ಅಣ್ಣಯ್ಯ ಬಹಳ ಹೊತ್ತು ಮೈಮೇಲೆ ಅರಿವೇ ಇಲ್ಲದೆ ಅಲ್ಲೇ ಬಿದ್ದಿದ್ದ. ಅದೃಷ್ಟವಶಾತ್ ಒಬ್ಬ ಕಟುಕ ಆ ಕಡೆ ಬಂದ. ಅವನ ಜೊತೆಯಲ್ಲಿ ಒಂದು ಕುರಿಯೂ

ಬಂತು. ಕಟುಕ ಅಣ್ಣಯ್ಯನನ್ನು ಮೇಲಕ್ಕೆತ್ತಿ “ಏನಾಯಿತಯ್ಯಾ ನಿನಗೆ?” ಎಂದು ಕೇಳಿದ. ಅಣ್ಣಯ್ಯ ನಡೆದದ್ದನ್ನೆಲ್ಲಾ ಹೇಳಿದ. ಕಟುಕ ಜೇಬಿನಿಂದ ಒಂದು ಅಚ್ಚು ಬೆಲ್ಲ ತೆಗೆದು ಅವನಿಗೆ ಕೊಟ್ಟು “ಇದನ್ನು ತಿಂದು ಸ್ವಲ್ಪ ಚೇತರಿಸಿಕೊ. ನಿನ್ನ ಹಸು ಹಾಲು ಕೊಡುವುದಿಲ್ಲ. ಅದು ಮುದಿಯಾಗಿ ಹೋಗಿದೆ. ಇನ್ನೇನಿದ್ದರೂ ಕಟುಕರ ಅಂಗಡಿ ಒಂದಕ್ಕೇ ಅದು ಯೋಗ್ಯವಾದುದು!” ಎಂದು ಹೇಳಿದ. ಅಣ್ಣಯ್ಯನಿಗೆ ಬಹಳ ದುಃಖವಾಯಿತು. ಅವನು “ಅಯ್ಯೋ! ಹೀಗೆ ಅಂತ ತಿಳಿದಿದ್ದರೆ ಇದನ್ನು ತೆಗೆದುಕೊಳ್ಳುತ್ತಲೇ ಇರಲಿಲ್ಲ. ಇದನ್ನು ಕೊಂದರೆ ನನಗೆ ಬಂದ ಲಾಭವೇನು? ನಾನು ಮಾಂಸ ತಿನ್ನುವವನಲ್ಲ. ಕುರಿಯಾದರೂ ಆಗಿದ್ದರೆ ಉಣ್ಣೆಯಾದರೂ ಸಿಕ್ಕುತ್ತಿತ್ತು” ಎಂದ. ಕಟುಕ “ಹಾಗಾದರೆ ನಿನ್ನ ಇಷ್ಟದಂತೆಯೇ ಆಗಲಿ. ನನ್ನ ಕುರಿಯನ್ನು ನಿನಗೆ ಕೊಡುತ್ತೇನೆ, ನಿನ್ನ ಹಸುವನ್ನು ನನಗೆ ಕೊಡು” ಎಂದ. ಅಣ್ಣಯ್ಯ “ಒಪ್ಪಿದೆ! ದಮ್ಮಯ್ಯ ಇಷ್ಟರ ಮಟ್ಟಿಗೆ ಹೇಳಿದೆಯಲ್ಲಾ!” ಎಂದು ತನ್ನ ಹಸುವನ್ನು ಕಟುಕನಿಗೆ ಕೊಟ್ಟು ಅವನ ಕುರಿಯನ್ನು ತಾನು ಹಿಡಿದುಕೊಂಡು ಹೊರಟ.

ಸ್ವಲ್ಪ ಹೊತ್ತಿನಲ್ಲೇ ಅವನ ಎದುರಿಗೆ ಒಬ್ಬ ಹಳ್ಳಿಯವನು ಬಂದ. ಇವನ ಹೆಗಲ ಮೇಲೆ ದೊಡ್ಡದೊಂದು ಕುಂಬಳಕಾಯಿ ಇತ್ತು. ಹಳ್ಳಿಯವನು ಅಣ್ಣಯ್ಯನನ್ನು ನೋಡಿ “ಈಗ ಹೊತ್ತು ಎಷ್ಟಾಗಿರಬಹುದಯ್ಯಾ ಹುಡುಗ?” ಎಂದು ಕೇಳಿದ. ಅವನು ಮಾತಾಡಿಸಿದುದೇ ಸಾಕಾಯಿತು– ಅಣ್ಣಯ್ಯ ಅವನಿಗೆ ತನ್ನ ಕತೆಯನ್ನೆಲ್ಲಾ ಹೇಳಿಬಿಟ್ಟ. ಅನಂತರ ಅವನು ಹಳ್ಳಿಯವನ ಹೆಗಲಮೇಲಿದ್ದ ಕುಂಬಳಕಾಯನ್ನು ತೋರಿಸಿ “ಇದನ್ನು ಎಲ್ಲಿಗೆ ಒಯ್ಯುತ್ತಿರುವೆ?” ಎಂದು ಕೇಳಿದ. ಅವನು “ಇಲ್ಲೇ ಮುಂದಿನ ಹಳ್ಳಿಗೆ ಹೋಗುತ್ತೇನೆ. ಅಲ್ಲಿ ನಮ್ಮ ನೆಂಟರ ಮನೆಯಿದೆ. ನಾಳೆ ಅವರ ಮನೆಯಲ್ಲಿ ಏನೋ ಹಬ್ಬ ನಡೆಯುತ್ತದೆ. ನನ್ನನ್ನು ಬರಹೇಳಿದ್ದಾರೆ. ಬರಿಯ ಕೈಯಲ್ಲಿ ಏಕೆ ಹೋಗಬೇಕು ಎಂದು ಇದನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. ಇದು ನಮ್ಮ ಮನೆಯ ಹಿತ್ತಲಿನ ಬಳಿಯಲ್ಲೇ ಬಿಟ್ಟದ್ದು. ಸೀ ಕುಂಬಳಕಾಯಿ. ಬಹಳ ಚೆನ್ನಾಗಿದೆ. ಎಷ್ಟು ಭಾರ

ವಾಗಿದೆ! ಬೇಕಾದರೆ ನೋಡು" ಎಂದು ಅದನ್ನು ಅಣ್ಣಯ್ಯನ ಕೈಗೆ ಕೊಟ್ಟ.

ಅಣ್ಣಯ್ಯ ಅದನ್ನು ಕೈಯಲ್ಲಿ ಹಿಡಿದುಕೊಂಡು ನೋಡಿ, "ನಿಜ, ಬಹಳ ಚೆನ್ನಾಗಿದೆ. ಇಲ್ಲಿ ನೋಡು—ನನ್ನ ಕುರಿಯನ್ನು. ಸ್ವಲ್ಪಹೊತ್ತಿನ ಮುಂಚೆ ಒಬ್ಬ ಮನುಷ್ಯನಿಗೆ ನನ್ನ ಹಸುವನ್ನು ಕೊಟ್ಟು ಅದಕ್ಕೆ ಬದಲಾಗಿ ಇದನ್ನು ತೆಗೆದುಕೊಂಡೆ" ಎಂದ.

ಹಳ್ಳಿಯವನ ಕಿವಿ ನೆಟ್ಟಗಾಯಿತು. ಅವನು ಗಂಭೀರವಾದ ಮುಖದಿಂದ ತಲೆ ಅಲ್ಲಾಡಿಸುತ್ತಾ "ಅಯ್ಯೋ ಪಾಪ! ಹುಡುಗ, ಏನೂ ಅರಿಯದವನು ಎಂತ ಯಾರೋ ನಿನಗೆ ಮೋಸ ಮಾಡಿ ಹೋಗಿದ್ದಾರೆ. ಹೇಳುತ್ತೇನೆ ಕೇಳು. ಅದೋ ನೋಡು—ಆ ಮರಗಳ ನಡುವೆ ಮನೆ ಗಳು ಕಾಣುತ್ತವೆಯಲ್ಲಾ, ಆ ಹಳ್ಳಿಯ ಮೂಲಕ ನಾನು ಈಗತಾನೆ ಬಂದೆ. ಅಲ್ಲಿಯ ಗೌಡನ ಮನೆಯಲ್ಲಿ ಒಂದು ಕುರಿ ಕಳೆದುಹೋಗಿದೆ ಯಂತೆ. ಅದನ್ನು ಕದ್ದುತಂದವನು ಯಾವನೋ ನಿನಗೆ ಇದನ್ನು ಕೊಟ್ಟು ಬಿಟ್ಟು ನಿನ್ನ ಹಸುವನ್ನು ಹಿಡಿದುಕೊಂಡು ಹೋಗಿರಬೇಕು. ನೀನೇ ನಾದರೂ ಇದನ್ನು ತೆಗೆದುಕೊಂಡು ಆ ಹಳ್ಳಿಗೆ ಹೋದರೆ ನಿನ್ನನ್ನು ಕಳ್ಳನೆಂದು ಅವರು ಹಿಡಿದುಹಾಕುವುದು ಖಂಡಿತ. ಅಷ್ಟೇ ಅಲ್ಲ; ಆ ಊರಿನಲ್ಲಿ ಕಳ್ಳತನ ಮಾಡಿದವರನ್ನೆಲ್ಲಾ ಕೈಕಾಲು ಕಟ್ಟಿ ಊರ ಹೊರಗಿರುವ ನೀರಿನ ಕೊಳದಲ್ಲಿ ಎಸೆದು ಬಿಡುತ್ತಾರೆ" ಎಂದು ಬೆದರಿಸಿದ.

ಪಾಪ! ಅಣ್ಣಯ್ಯನಿಗೆ ಮೈಯೆಲ್ಲಾ ನಡುಕ ಹತ್ತಿಕೊಂಡಿತು. ಮುಂದೆ ಏನು ಮಾಡಬೇಕೆಂದು ತೋಚಲಿಲ್ಲ. ಅವನು ಹಳ್ಳಿಯವನ ಕಾಲಿಗೆ ಬಿದ್ದು "ಅಯ್ಯಾ, ಹೇಗಾದರೂ ನನ್ನನ್ನು ಈ ಕಷ್ಟದಿಂದ ಪಾರು ಮಾಡು. ನಿನ್ನನ್ನು ಬೇಡಿಕೊಳ್ಳುತ್ತೇನೆ. ನನ್ನ ಕುರಿಯನ್ನು ನೀನು ತೆಗೆದುಕೊಂಡು ನಿನ್ನ ಕುಂಬಳಕಾಯನ್ನು ನನಗೆ ಕೊಟ್ಟುಬಿಡು" ಎಂದು ಅಂಗಲಾಚಿದ.

ಹಳ್ಳಿಯವನಿಗೆ ಬೇಕಾಗಿದ್ದುದೂ ಅಷ್ಟೆ. ಆದರೂ ಅವನು ಇಷ್ಟ ವಿಲ್ಲದವನಂತೆ ನಟನೆ ಮಾಡುತ್ತಾ, ಕೊನೆಗೆ ಏನೋ ಬಹಳ ದಯೆ

ತೋರಿಸುವವನ ಹಾಗೆ "ಹೋಗಲಿ, ಪಾಪ, ಹುಡುಗ, ಯಾರೋ ನಿನಗೆ ಮೋಸ ಮಾಡಿದ್ದಾರೆ. ನೀನೇಕೆ ಅನ್ಯಾಯವಾಗಿ ತೊಂದರೆಗೆ ಸಿಕ್ಕ ಬೇಕು? ಇಗೋ ತೆಗೆದುಕೊ" ಎಂದು ಕುಂಬಳಕಾಯನ್ನು ಅಣ್ಣಯ್ಯನ ಭುಜದ ಮೇಲಿಟ್ಟು ಅವನ ಕುರಿಯ ಕೊರಳಿಗೆ ಕಟ್ಟಿದ್ದ ದಾರವನ್ನು ಕೈಗೆ ತೆಗೆದುಕೊಂಡು ಒಂದು ಅಡ್ಡದಾರಿಯಲ್ಲಿ ಹೊರಟುಹೋದ.

ಅಣ್ಣಯ್ಯನ ಮನಸ್ಸಿಗೆ ನಿಶ್ಚಿಂತೆಯಾಯಿತು. "ಹೋದರೆ ಹೋಗಲಿ! ಈವತ್ತಿಗೆ ಬದುಕಿದೆನಲ್ಲಾ! ಇಷ್ಟರ ಮೇಲೆ ಆ ಕುರಿ ಹೋದದ್ದು ಒಳ್ಳೆಯದೇ ಆಯಿತು. ಇಲ್ಲದಿದ್ದರೆ ಅದಕ್ಕೆ ನಿತ್ಯವೂ ಹುಲ್ಲು ನೀರು ಒದಗಿಸುವುದೇ ನನಗೆ ಕೆಲಸವಾಗಿಬಿಡುತ್ತಿತ್ತು. ಈಗೇನು, ಸುಖವಾಗಿ ಮನೆಗೆ ಹೋಗಿ ಅಮ್ಮನ ಕೈಲಿ ಈ ಕುಂಬಳಕಾಯನ್ನು ಕೊಟ್ಟರೆ, ಹೆಚ್ಚಿ ಬೇಯಿಸಿ ರುಚಿಯಾಗಿ ಪಲ್ಯ ಮಾಡಿ ಬಡಿಸುತ್ತಾಳೆ" ಎಂದುಕೊಂಡು ಸಂತೋಷದಿಂದ ಮುಂದೆ ನಡೆದ.

ಕಡೆಗೆ ಅಣ್ಣಯ್ಯ ತನ್ನ ತೌರೂರಿನ ಪಕ್ಕದ ಹಳ್ಳಿಗೆ ಬಂದ. ಅಲ್ಲಿ ಊರ ಬಾಗಿಲಿನಲ್ಲೇ ಕತ್ತರಿ ಚಾಕು ಕುಡುಗೋಲು ಮುಂತಾದ ವಸ್ತುಗಳನ್ನು ಹರಿತ ಮಾಡುವವನು ಒಬ್ಬ ಕುಳಿತಿದ್ದ. ಅವನ ಮುಂದೆ ಒಂದು ದೊಡ್ಡ ಮಸೆಯುವ ಕಲ್ಲು ಇತ್ತು. ಅದರ ಮೇಲೆ ಅವನು ಈಗಾಗಲೆ ನೂರಾರು ಆಯುಧಗಳನ್ನು ಉಜ್ಜಿ ಹರಿತ ಮಾಡಿದ್ದುದರಿಂದ ಅದು ನುಣ್ಣಗಾಗಿ ಬಿಸಿಲಿನಲ್ಲಿ ಹೊಳೆಯುತ್ತಿತ್ತು. ಅಣ್ಣಯ್ಯ ಅಲ್ಲಿಗೆ ಬಂದಾಗ ಅವನು ಒಂದು ಕುಡುಗೋಲನ್ನು ಮಸೆಯುತ್ತಿದ್ದ.

ಅಣ್ಣಯ್ಯ ಮಸೆಯುವುದನ್ನು ನೋಡುತ್ತಾ ಅಲ್ಲೇ ನಿಂತ. ಮಸೆಯುವವನು "ಯಾವೂರಯ್ಯಾ ನಿನ್ನದು?" ಎಂದು ಕೇಳಿದ. ಅಣ್ಣಯ್ಯ "ನಮ್ಮದು ಇಲ್ಲೇ ಮುಂದಿನ ಊರು. ನೀನೇನಣ್ಣಾ ಬಹಳ ಗೆಲುವಾಗಿದ್ದೀಯ? ಕೆಲಸ ಚೆನ್ನಾಗಿ ನಡೆಯುತ್ತಾ ಇದೆಯೆ?" ಎಂದ.

ಮಸೆಯುವ ಕಲ್ಲಿನವನು "ಓಹೋ! ನನಗೇನಯ್ಯಾ ಕೊರತೆ? ನಮ್ಮ ಕೆಲಸ ಎಂದರೆ ರಾಜಾ ಕೆಲಸ! ಜೇಬಿಗೆ ಕೈಹಾಕಿದಾಗಲೆಲ್ಲಾ ದುಡ್ಡಿರುತ್ತೆ ನಮ್ಮ ಹತ್ತಿರ!" ಎಂದು ಅಣ್ಣಯ್ಯನ ಹೆಗಲ ಮೇಲಿದ್ದ

ಕುಂಬಳಕಾಯನ್ನು ನೋಡಿ, "ಎಲ್ಲಿ ಸಂಪಾದಿಸಿದೆಯಯ್ಯಾ ಇದನ್ನ? ಒಳ್ಳೆಯ ಕುಂಬಳಕಾಯನ್ನೇ ಹೊಡೆದಿದ್ದೀಯ!" ಎಂದ.

ಅಣ್ಣಯ್ಯ "ಒಂದು ಕುರಿಯನ್ನು ಕೊಟ್ಟು ಅದಕ್ಕೆ ಬದಲಾಗಿ ಇದನ್ನು ತಂದೆ" ಎಂದ.

ಮಸೆಯುವವನು "ಕುರಿ ಎಲ್ಲಿತ್ತಯ್ಯಾ ನಿನಗೆ?" ಎಂದ.

ಅಣ್ಣಯ್ಯ "ಒಂದು ಹಸುವನ್ನು ಕೊಟ್ಟು ಅದಕ್ಕೆ ಬದಲಾಗಿ ತಂದಿದ್ದೆ" ಎಂದ.

ಮಸೆಯುವವನು "ಹಸು ಎಲ್ಲಿತ್ತು?" ಎಂದ.

ಅಣ್ಣಯ್ಯ "ಓ! ಅದೂ ನಾನು ಕೊಂಡುಕೊಂಡಿದ್ದಲ್ಲ! ಒಂದು ಕುದುರೆಯನ್ನು ಕೊಟ್ಟು ಅದಕ್ಕೆ ಬದಲಾಗಿ ತಂದೆ" ಎಂದು ಉತ್ಸಾಹ ದಿಂದ ಹೇಳಿದ.

"ಅದು ಸರಿ. ಕುದುರೆ ಎಲ್ಲಿತ್ತಯ್ಯಾ?" ಎಂದು ಮಸೆಯುವವನು ಕೇಳಿದ.

ಅಣ್ಣಯ್ಯ "ಅದಕ್ಕೆ ಬದಲಾಗಿ ನನ್ನ ತಲೆಯ ಗಾತ್ರದ ಬೆಳ್ಳಿಯ ಉಂಡೆಯನ್ನು ಕೊಟ್ಟೆ" ಎಂದ.

ಮಸೆಯುವವನು "ಬೆಳ್ಳಿ ಎಲ್ಲಿತ್ತು?" ಎಂದು ಕೇಳಿದ.

ಅಣ್ಣಯ್ಯ "ಏಳು ವರ್ಷ ಒಂದೇ ಸಮನೆ ಕೆಲಸ ಮಾಡಿ ಆ ಬೆಳ್ಳಿ ಯನ್ನು ಸಂಪಾದಿಸಿದ್ದೆ" ಎಂದು ಹೇಳಿದ.

ಮಸೆಯುವವನಿಗೆ ಅಣ್ಣಯ್ಯ ಎಂಥ ತಿಳಿಗೇಡಿ ಎಂದು ಕೂಡಲೆ ಗೊತ್ತಾಯಿತು. ಅವನು "ಬಹಳ ಬುದ್ಧಿವಂತಿಕೆಯ ಕೆಲಸಗಳನ್ನೇ ಮಾಡಿದ್ದೀಯ. ಆದರೂ ನಾನೊಂದು ಮಾತು ಹೇಳುತ್ತೇನೆ ಕೇಳು. ನೀನು ಜೇಬಿನಲ್ಲಿ ಕೈಯಿಟ್ಟಾಗಲೆಲ್ಲಾ ದುಡ್ಡು ಸಿಕ್ಕುವ ಹಾಗಾದರೆ ಅದಕ್ಕೇನು ಹೇಳುವೆ?" ಎಂದ.

ಅಣ್ಣಯ್ಯ "ಅದು ಹೇಗಯ್ಯಾ ಆಗುತ್ತೆ?" ಎಂದ.

ಮಸೆಯುವ ಕಲ್ಲಿನವನು "ಅದೇನೂ ಕಷ್ಟವಲ್ಲವಯ್ಯಾ! ನನ್ನಂ ತೆಯೇ ನೀನೂ ಒಂದು ಮಸೆಯುವ ಕಲ್ಲನ್ನು ಸಂಪಾದಿಸಿದರೆ ಸಾಕು— ಅದೃಷ್ಟ ತಾನಾಗಿಯೇ ಒಲಿಯುತ್ತದೆ" ಎಂದು ಹೇಳಿ, ಒಂದೆರಡು ನಿಮಿಷ

ಸುಮ್ಮನಿದ್ದು, ಮತ್ತೆ "ಈ ಕಲ್ಲನ್ನೇ ಕೊಂಡುಕೊಳ್ಳುತ್ತೀಯೇನು ಹೇಳು? ಸ್ವಲ್ಪ ಸವೆದುಹೋಗಿದೆ. ಆದರೂ ಚಿಂತೆಯಿಲ್ಲ. ನಿನ್ನ ಹೆಗಲ ಮೇಲಿರುವ ಕುಂಬಳಕಾಯಿ ಕೊಟ್ಟುಬಿಡು, ಇದನ್ನು ಕೊಡುತ್ತೇನೆ" ಎಂದ.

ಅಣ್ಣಯ್ಯನಿಗೆ ಬಹಳ ಸಂತೋಷವಾಯಿತು. "ಜೇಬಿಗೆ ಕೈ ಹಾಕಿದಾಗಲೆಲ್ಲಾ ದುಡ್ಡು ಸಿಕ್ಕುವ ಹಾಗಾದರೆ ಆಮೇಲೆ ಪ್ರಪಂಚದಲ್ಲಿ ನನ್ನಷ್ಟು ಸಾಹುಕಾರರೇ ಬೇರೆ ಯಾರೂ ಇರುವುದಿಲ್ಲ" ಎಂದು ಯೋಚಿಸಿ ಉಬ್ಬಿ, "ಅಗತ್ಯವಾಗಿ ತೆಗೆದುಕೊ, ಮಹರಾಯ" ಎಂದು ಕುಣಿದು ಒಂದೆರಡು ಸಾರಿ ಲಾಗ ಹಾಕಿದ.

ಅಣ್ಣಯ್ಯ ಹೀಗೆ ಅತ್ತಿತ್ತ ಸುತ್ತಾಡುತ್ತಿದ್ದಾಗ ಮಸೆಯುವವನು ತನ್ನ ಕಲ್ಲನ್ನು ಮರೆಮಾಡಿ, ಅಲ್ಲೇ ಬಿದ್ದಿದ್ದ ಯಾವುದೋ ಒಂದು ಸಾಧಾರಣವಾದ ಕಲ್ಲನ್ನು ಎತ್ತಿ ಅಣ್ಣಯ್ಯನ ಕೈಯಲ್ಲಿಟ್ಟ. "ಈ ಕಲ್ಲು ಬಹಳ ಸತ್ವವುಳ್ಳದ್ದು. ತಿಳಿವಳಿಕೆಯಿಂದ ಕೆಲಸ ಮಾಡಿದರೆ ಇದರಿಂದ ತುಕ್ಕು ಹಿಡಿದ ಹಳೆಯ ಮೊಳೆಯನ್ನು ಬೇಕಾದರೂ ಕ್ಷೌರದವನ ಕತ್ತಿಯಷ್ಟು ಚೂಪಾಗಿ ಮಾಡಬಹುದು" ಎಂದು ಹೇಳಿದ.

ಸಂತೋಷದ ಭರದಲ್ಲಿ ಅಣ್ಣಯ್ಯನಿಗೆ ಆ ಕಲ್ಲು ತಾನು ಮೊದಲು ನೋಡಿದ್ದ ಕಲ್ಲು ಅಲ್ಲವೆಂದು ಗೊತ್ತೇ ಆಗಲಿಲ್ಲ. ಅವನು ಹಿಂದೆ ಯಾವಾಗಲೂ ಇಲ್ಲದಷ್ಟು ಹಗುರವಾದ ಮನಸ್ಸಿನಿಂದ ಮುಂದೆ ಹೊರಟ.

ಇಷ್ಟರಲ್ಲೇ ಸಂಜೆಯಾಯಿತು. ಬೆಳಗಿನಿಂದ ಒಂದೇ ಸಮನೆ ನಡೆದುಬಂದಿದ್ದುದರಿಂದ ಅಣ್ಣಯ್ಯನಿಗೆ ಬಹಳ ಆಯಾಸವಾಗಿತ್ತು. ಇದರ ಮೇಲೆ ಹಸಿವು ಪೀಡಿಸುತ್ತಿತ್ತು. ಜೊತೆಗೆ ಆ ಕಲ್ಲನ್ನು ಬೇರೆ ಹೊರಬೇಕಾಗಿತ್ತು.

ಅವನು ಹಾಗೂ ಹೀಗೂ ಕಾಲೆಳೆದುಕೊಂಡು ರಸ್ತೆಯ ಪಕ್ಕದಲ್ಲಿದ್ದ ಒಂದು ಕೊಳದ ಹತ್ತಿರಕ್ಕೆ ಬಂದ. ಅಲ್ಲಿ ಮುಖ ತೊಳೆದು ತಣ್ಣಗೆ ನೀರು ಕುಡಿದು ಸ್ವಲ್ಪ ಹೊತ್ತು ಸುಧಾರಿಸಿಕೊಂಡು ಹೋಗೋಣವೆಂದು ನೀರಿನ ಸಮೀಪಕ್ಕೆ ನಡೆದು ಕಾಲಿನ ಹತ್ತಿರ ಕಲ್ಲನ್ನಿಟ್ಟು ನೀರಿಗೆ ಬಾಗಿದ. ಅವನು ನೀರು ಕುಡಿಯುತ್ತಿದ್ದಾಗ ಕಾಲು ಕಲ್ಲಿಗೆ ತಾಕಿತು. ಕಲ್ಲಿನ

ಕೆಳಗಿನ ನೆಲ ತೊಯ್ದು ಜಾರಿಕೆಯಾಗಿದ್ದುದರಿಂದ ಕಲ್ಲು ನೀರಿನೊಳಕ್ಕೆ ಸರಿದು ಧೊಪ್ಪನೆ ಮುಳುಗಿತು.

ಅಣ್ಣಯ್ಯ ಸ್ವಲ್ಪ ಹೊತ್ತು ಕೊಳದ ತಳದಲ್ಲಿದ್ದ ಕಲ್ಲನ್ನು ನೆನೆಸಿಕೊಳ್ಳುತ್ತಾ ನಿಂತ. ಅನಂತರ ಇದ್ದಕ್ಕಿದ್ದಂತೆಯೇ ಅವನಿಗೆ ಒಂದು ಯೋಚನೆ ಹೊಳೆಯಿತು. ಅವನು ಆನಂದದಿಂದ ಧಿಮ್ಮನೆ ಮೇಲಕ್ಕೆ ಹಾರಿದ. ತನಗೆ ಇದ್ದ ಒಂದೇ ಒಂದು ತೊಂದರೆಯೂ ಕಳೆದುಹೋಯಿತಲ್ಲಾ ಎಂದು ಅವನ ಸಂತೋಷ ಹಿಡಿಸದಷ್ಟಾಯಿತು. ಅವನು ಅಲ್ಲೇ ಮೊಳಕಾಲೂರಿ ಕುಳಿತು ದೇವರನ್ನು ವಂದಿಸಿದ.

ಕಡೆಗೆ "ಇನ್ನು ನನ್ನ ಸುಖಕ್ಕೆ ಯಾವ ತಡೆಯೂ ಇಲ್ಲ" ಎಂದುಕೊಂಡು ಹಿಗ್ಗಿ, ಅಣ್ಣಯ್ಯ ಕೈಗಳೆರಡನ್ನೂ ಜೋರಾಗಿ ಬೀಸುತ್ತಾ ಮನೆಯ ಕಡೆಗೆ ಹೊರಟ.

# ರೂಪವತಿ

ಒಂದಾನೊಂದು ಕಾಲದಲ್ಲಿ ಗಂಡಹೆಂಡಿರಿಬ್ಬರಿದ್ದರು. ಅವರಿಗೆ ಬಹಳ ದಿನ ಮಕ್ಕಳಾಗಲಿಲ್ಲ. ಮಕ್ಕಳಾಗಬೇಕೆಂಬ ಆಸೆ ಅವರಿಗೆ ಬಹಳ ವಾಯಿತು. ಕಡೆಗೊಮ್ಮೆ ಅವರ ಹರಕೆ ಕೈಗೂಡುವ ಕಾಲ ಬಂತು.

ಅವರ ಮನೆಯ ಹಿಂಭಾಗದಲ್ಲಿ ಒಂದು ಸಣ್ಣ ಕಿಟಕಿಯಿತ್ತು. ಅದರಲ್ಲಿ ನಿಂತು ನೋಡಿದರೆ ಹೊರಗೆ ಒಂದು ಸೊಗಸಾದ ತೋಟ ಕಾಣುತ್ತಿತ್ತು. ಅದರ ಸುತ್ತಲೂ ಎತ್ತರವಾದ ಗೋಡೆಗಳಿದ್ದವು. ಒಳಗೆ ಘಮಘಮಿಸುವ ಹೂವಿನ ಗಿಡಗಳಿದ್ದವು. ಒಂದು ದಿನ ಆ ಹೆಂಗಸು ಕಿಟಕಿಯ ಬಳಿ ನಿಂತು ತೋಟದ ಕಡೆಗೆ ನೋಡುತ್ತಿದ್ದಳು. ಗೊಂಚಲು ಗೊಂಚಲಾಗಿ ಬಿಟ್ಟು ಕೆಂಪಗೆ ಮಾಗಿದ್ದ ಕೆಲವು ಮಾವಿನಹಣ್ಣುಗಳು ಅವಳ ಕಣ್ಣಿಗೆ ಬಿದ್ದವು. ಅವಳಿಗೆ ಅವನ್ನು ತಿನ್ನಬೇಕೆಂಬ ಬಯಕೆ ಉಂಟಾಯಿತು. ಈ ಬಯಕೆ ದಿವಸದಿವಸಕ್ಕೂ ಹೆಚ್ಚುತ್ತಾ ಬಂತು. ಆದರೆ ಆ ಹಣ್ಣುಗಳನ್ನು ಕಿತ್ತು ತರುವುದು ಅಸಾಧ್ಯವೆಂದು ಅವಳಿಗೆ ಗೊತ್ತಿತ್ತು. ಏಕೆಂದರೆ ತೋಟದ ಒಡತಿ ಒಬ್ಬ ಮಾಟಗಾತಿ. ಹೀಗಾಗಿ ಅವಳು ಈ ಯೋಚನೆಯಲ್ಲೇ ಕೃಶಳಾಗಿ ಹಾಸುಗೆ ಹಿಡಿದಳು.

ಅವಳ ಗಂಡನಿಗೆ ಗಾಬರಿಯಾಯಿತು. ಅವನು "ಹೀಗೇಕೆ ಮಂಕಾಗಿರುವೆ? ವಿಚಾರವೇನು?" ಎಂದು ಅವಳನ್ನು ಕೇಳಿದ. ಅದಕ್ಕೆ ಅವಳು "ಅಯ್ಯೋ, ಏನು ಹೇಳಲಿ! ನನಗೆ ಆ ಮಾಟಗಾತಿಯ ತೋಟದಲ್ಲಿ ಬೆಳೆಯುವ ಮಾವಿನಹಣ್ಣನ್ನು ತಿನ್ನಬೇಕು ಎನ್ನಿಸಿದೆ. ಇಲ್ಲದಿದ್ದರೆ ನಾನು ಸಾಯುವುದು ಖಂಡಿತ!" ಎಂದಳು.

ಅವನಿಗೆ ಹೆಂಡತಿಯ ಮೇಲಿದ್ದ ಪ್ರೀತಿ ಬಹಳ. ಆದ್ದರಿಂದ ಅವನು "ನನ್ನ ಹೆಂಡತಿ ಸಾಯುವುದಕ್ಕಿಂತಲೂ ಆ ಹಣ್ಣುಗಳನ್ನು ತರುವುದೇ

ಮೇಲು, ಆಗುವುದೆಲ್ಲಾ ಆಗಲಿ" ಎಂದುಕೊಂಡ. ಅದೇ ಪ್ರಕಾರ ಸಂಜೆಯ ಮಬ್ಬಿನಲ್ಲಿ ಮೆಲ್ಲನೆ ಹೋಗಿ ಮಾಟಗಾತಿಯ ತೋಟದ ಗೋಡೆಯನ್ನು ಹತ್ತಿ ಇಳಿದು ನಾಲ್ಕಾರು ಮಾವಿನಹಣ್ಣುಗಳನ್ನು ತಂದು ತನ್ನ ಹೆಂಡತಿಗೆ ಕೊಟ್ಟ. ಅವಳು ಕೂಡಲೆ ಅವನ್ನೆಲ್ಲಾ ಹೆಚ್ಚಿ ಗಬಗಬಗನೆ ತಿಂದುಬಿಟ್ಟಳು. ಅದನ್ನು ತಿಂದಂತೆಲ್ಲಾ ಇನ್ನೂ ಹೆಚ್ಚಾಗಿ ತಿನ್ನಬೇಕೆಂಬ ಆಸೆ ಬಲಿಯಿತು. ಮಾರನೆಯ ದಿನ ಈ ಆಸೆ ಮೊದಲನೆಯ ದಿನ ಇದ್ದುದಕ್ಕಿಂತಲೂ ಮೂರರಷ್ಟಾಗಿತ್ತು. ಅವಳ ಮನಸ್ಸನ್ನು ಸಮಾಧಾನಪಡಿಸಲು ಗಂಡ ಮತ್ತೆ ತೋಟಕ್ಕಿಳಿದು ಹಣ್ಣು ತರಬೇಕಾಯಿತು.

ಎರಡನೆಯ ದಿವಸ ಸಾಯಂಕಾಲ ಅವನು ಗೋಡೆಯನ್ನು ಹತ್ತಿ ಧುಮಿಕಿಹೋದ. ಆದರೆ, ಪಾಪ, ಹಿಂದಿನ ದಿನದಂತೆ ಜಯಪ್ರದನಾಗಿ ಹಿಂದಿರುಗಲಿಲ್ಲ. ಅವನು ಹಿಂದಿರುಗಿ ಬರುವಾಗ ಗೋಡೆಯ ಮೇಲಕ್ಕೆ ಏರುವ ಹೊತ್ತಿಗೆ ಮಾಟಗಾತಿ ಅವನ ಎದುರಿನಲ್ಲಿ ನಿಂತಿದ್ದಳು. "ಕಳ್ಳನ ಹಾಗೆ ನನ್ನ ತೋಟಕ್ಕೆ ಬಂದು ನನಗೆ ಸೇರಿದ ಹಣ್ಣುಗಳನ್ನೇಕೆ ಕದಿಯುವೆ? ಇದರಿಂದ ನಿನಗೆ ಕೆಡುಕಾಗುವುದು ಖಂಡಿತ" ಎಂದಳು. ಅದಕ್ಕೆ ಅವನು "ಅಯ್ಯೋ, ದಯೆ ತೋರಿಸು. ನಾನೇನು ಮಾಡಲಿ? ನನ್ನ ಹೆಂಡತಿ ಕಿಟಕಿಯಿಂದ ಈ ಹಣ್ಣುಗಳನ್ನು ನೋಡಿ ಇವನ್ನು ತಿನ್ನಬೇಕೆಂದು ಬಯಸಿದಳು. ನಾನು ಇವನ್ನು ತೆಗೆದುಕೊಂಡು ಹೋಗಿ ಕೊಡದಿದ್ದರೆ ಅವಳು ಇಷ್ಟುಹೊತ್ತಿಗೆ ತೀರಿಹೋಗಿರುತ್ತಿದ್ದಳು" ಎಂದ. ಈ ಉತ್ತರ ಮಾಟಗಾತಿಯ ಕೋಪವನ್ನು ಕೊಂಚಮಟ್ಟಿಗೆ ಕಡಿಮೆ ಮಾಡಿತು. ಅವಳು "ನೀನು ಹೇಳುವುದು ನಿಜವಾದರೆ, ನಾನು ನಿನಗೆ ಬೇಕಾದಾಗಲೆಲ್ಲಾ ಹಣ್ಣುಗಳನ್ನು ಒಯ್ಯಲು ಅವಕಾಶ ಕೊಡುತ್ತೇನೆ. ಆದರೆ ಒಂದು ಮಾತು. ನಿಮಗೆ ಇಷ್ಟರಲ್ಲೇ ಹುಟ್ಟುವ ಮಗುವನ್ನು ನೀವು ನನಗೆ ಕೊಟ್ಟುಬಿಡಬೇಕು. ಹೀಗೆ ಮಾಡಬೇಕಾದುದು ಮಗುವಿನ ಅನುಕೂಲಕ್ಕೆಂದೇ ತಿಳಿದುಕೊ. ನಾನು ಅದನ್ನು ತಾಯಿಗಿಂತಲೂ ಹೆಚ್ಚಾಗಿಯೇ ಸಾಕುತ್ತೇನೆ" ಎಂದಳು. ಸಿಕ್ಕಿಬಿದ್ದೆನಲ್ಲಾ ಎಂಬ ಗಾಬರಿಯಲ್ಲಿ ಅವನು ಮನಸ್ಸಿನ ಮೇಲೆ ಹತೋಟಿಯನ್ನೇ ಕಳೆದುಕೊಂಡಿದ್ದ.

ಆದ್ದರಿಂದ ಅವಳು ಕೇಳಿದ್ದಕ್ಕೆಲ್ಲಾ "ಆಗಲಿ" ಎಂದುಬಿಟ್ಟ. ಸ್ವಲ್ಪ ಕಾಲದ ಅನಂತರ ಒಂದು ಹೆಣ್ಣು ಕೂಸು ಹುಟ್ಟಿತು. ಕೂಡಲೆ ಮಾಟಗಾತಿ ಅವರ ಮನೆಗೆ ಬಂದು ಅದಕ್ಕೆ "ರೂಪವತಿ" ಎಂದು ಹೆಸರಿಟ್ಟು ಅದನ್ನು ತನ್ನೊಡನೆ ಕರೆದುಕೊಂಡು ಹೋದಳು.

ರೂಪವತಿಯಂತಹ ಚೆಲುವೆ ಪ್ರಪಂಚದಲ್ಲಿ ಇನ್ನೆಲ್ಲೂ ಇರಲಿಲ್ಲ. ಅವಳಿಗೆ ಹನ್ನೆರಡು ವರ್ಷ ವಯಸ್ಸಾಗಲು ಮಾಟಗಾತಿ ಅವಳನ್ನು ಕಾಡಿನ ಮಧ್ಯದಲ್ಲಿದ್ದ ಒಂದು ಗೋಪುರದೊಳಗೆ ಬಂಧಿಸಿಬಿಟ್ಟಳು. ಆ ಗೋಪುರದೊಳಕ್ಕೆ ಹತ್ತಿ ಹೋಗಲು ಮೆಟ್ಟಿಲುಗಳಿರಲಿಲ್ಲ. ಬಾಗಿಲೂ ಇರಲಿಲ್ಲ. ತುತ್ತತುದಿಯಲ್ಲಿ ಮಾತ್ರ ಒಂದು ಬಹಳ ಚಿಕ್ಕ ಕಿಟಕಿಯಿತ್ತು. ಮಾಟಗಾತಿ ಒಳಗೆ ಪ್ರವೇಶಿಸಬೇಕಾದರೆ ಆ ಕಿಟಕಿಯ ಕೆಳಗೆ ನಿಂತು, "ರೂಪವತಿ, ರೂಪವತಿ, ನಿನ್ನ ಕೂದಲನ್ನು ಕೆಳಕ್ಕೆ ಬಿಡು" ಎಂದು ಕೂಗುತ್ತಿದ್ದಳು. ರೂಪವತಿಗೆ ಸೊಗಸಾದ ನೀಳವಾದ ಬಂಗಾರದಂತೆ ಹೊಳೆಯುವ ಕೂದಲಿತ್ತು. ಇಳಿಯಬಿಟ್ಟರೆ ಅದು ನೆಲದವರೆಗೂ ಬರುತ್ತಿತ್ತು. ಮಾಟಗಾತಿಯ ಧ್ವನಿಯನ್ನು ಕೇಳಿದೊಡನೆ ಅವಳು ತನ್ನ ಜಡೆಯನ್ನು ಬಿಚ್ಚಿ, ತಾನು ಬಿದ್ದುಹೋಗದಂತೆ ಭದ್ರವಾಗಿರುವುದಕ್ಕಾಗಿ ಕೂದಲನ್ನು ಮೊದಲು ಕಿಟಕಿಯ ಚೌಕಟ್ಟಿನಲ್ಲಿದ್ದ ಒಂದು ಕೊಕ್ಕೆಗೆ ಸುತ್ತಿ ಉಳಿದ ಭಾಗವನ್ನೆಲ್ಲಾ ಕಿಟಕಿಯ ಹೊರಭಾಗದಲ್ಲಿ ಏಣಿಯ ಹಾಗೆ ಇಳಿಯಬಿಡುತ್ತಿದ್ದಳು. ಇದರ ಸಹಾಯದಿಂದ ಮುದುಕಿ ಮೇಲೇರಿ ಗೋಪುರವನ್ನು ಸೇರುತ್ತಿದ್ದಳು.

ಹೀಗೆ ಎರಡು ಮೂರು ವರ್ಷ ಕಳೆದವು. ಒಂದು ದಿನ ಆ ದೇಶದ ರಾಜನ ಮಗ ಕಾಡಿನಲ್ಲಿ ಕುದುರೆಯ ಮೇಲೆ ಹೋಗುತ್ತಿದ್ದಾಗ ಈ ಗೋಪುರದ ಬಳಿ ಬಂದ. ಆಗ ಒಂದು ಅತಿಶಯವಾದ ಮೃದುಮಧುರವಾದ ಹಾಡಿನ ದನಿ ಅವನ ಕಿವಿಗೆ ಬಿತ್ತು. ಅವನು ನಿಂತು ಕೇಳಿದ. ಹಾಡುತ್ತಿದ್ದವಳು ರೂಪವತಿ. ತನ್ನ ಏಕಾಂತವಾಸದಲ್ಲಿ ಹೀಗೆ ಹಾಡಿಕೊಂಡು ಕಾಲ ಕಳೆಯುವುದು ಅವಳ ಅಭ್ಯಾಸವಾಗಿತ್ತು. ಗೋಪುರವನ್ನು ಪ್ರವೇಶಿಸಲು ರಾಜಕುಮಾರ ಬಾಗಿಲಿಗಾಗಿ ಹುಡುಕಾಡಿ, ಯಾವ ಕಡೆಯೂ ಬಾಗಿಲು ಕಾಣದಿರಲು ವ್ಯಸನದಿಂದ ಅರಮನೆಗೆ ಹಿಂತಿರುಗಿದ. ಆದರೆ

ಅವನು ಕಾಡಿನಲ್ಲಿ ಕೇಳಿದ್ದ ಇಂಪಿನ ಧ್ವನಿಯನ್ನು ಮರೆಯುವಂತೆಯೇ ಇರಲಿಲ್ಲ. ಆದ್ದರಿಂದ ಅವನು ಪ್ರತಿದಿನವೂ ಅದನ್ನು ಮತ್ತೆ ಮತ್ತೆ ಕೇಳಿ ಆನಂದಿಸಲು ಕುದುರೆಯೇರಿ ಕಾಡಿಗೆ ಬರತೊಡಗಿದ.

ಒಂದು ದಿನ ಅವನೊಂದು ಮರದ ಹಿಂದೆ ನಿಂತಿದ್ದಾಗ ಮಾಟಗಾತಿ ಬಂದುದು ಅವನ ಕಣ್ಣಿಗೆ ಬಿತ್ತು. "ರೂಪವತಿ, ರೂಪವತಿ, ನಿನ್ನ ಕೂದಲನ್ನು ಕೆಳಗೆ ಬಿಡು" ಎಂಬ ಮಾತುಗಳು ಕೇಳಿಬಂದವು. ಕೂದಲು ಕೆಳಗಿಳಿದುದನ್ನೂ ಅವನು ಕಂಡ. "ಗೋಪುರಕ್ಕೆ ಹತ್ತಿಹೋಗಲು ಏಣಿ ಅವಳ ಕೂದಲೇ ಆದರೆ ನನ್ನ ಅದೃಷ್ಟ ಹೇಗಿದೆಯೋ ನಾನೂ ಒಂದು ಸಾರಿ ನೋಡುತ್ತೇನೆ" ಎಂದುಕೊಂಡು ರಾಜಕುಮಾರ ಅರಮನೆಗೆ ಹಿಂದಿರುಗಿದ.

ಮಾರನೆಯ ದಿವಸ ಸಂಜೆಯ ಸುಮಾರಿಗೆ ಅವನು ಕಾಡಿಗೆ ಬಂದು "ರೂಪವತಿ, ರೂಪವತಿ, ನಿನ್ನ ಕೂದಲನ್ನು ಕೆಳಗೆ ಬಿಡು" ಎಂದು ಕೂಗಿದ. ಒಡನೆಯೇ ಕೂದಲ ರಾಶಿ ಕೆಳಗಿಳಿಯಿತು. ರಾಜಕುಮಾರ ಮೇಲಕ್ಕೇರಿದ.

ಅವನು ಬಂದುದನ್ನು ನೋಡಿ ರೂಪವತಿಗೆ ದಿಗಿಲಾಯಿತು. ಏಕೆಂದರೆ ಮನುಷ್ಯನೊಬ್ಬನನ್ನು ಅವಳು ಅದುವರೆಗೂ ನೋಡಿಯೇ ಇರಲಿಲ್ಲ. ಆದರೆ ರಾಜಕುಮಾರ ಅವಳೊಡನೆ ಬಹಳ ಕರುಣೆಯಿಂದ ಮಾತಾಡಿದ. ಅವಳ ಹಾಡುಗಾರಿಕೆ ತನ್ನ ಹೃದಯದ ಮೇಲೆ ಎಂತಹ ಪರಿಣಾಮವನ್ನು ಉಂಟುಮಾಡಿದ್ದಿತೆಂಬುದನ್ನು ತಿಳಿಸಿದ. ಅವಳನ್ನು ನೋಡಿದ ಹೊರತು ತನ್ನ ಮನಸ್ಸಿಗೆ ಸಮಾಧಾನವೇ ಇಲ್ಲದಂತಾಗಿತ್ತು ಎಂದ. ಇವನ್ನೆಲ್ಲಾ ಕೇಳಿ ಅವಳ ಭೀತಿ ಓಡಿಹೋಯಿತು, ಮನಸ್ಸು ಹಗುರವಾಯಿತು. ಅವನು ಅವಳನ್ನು "ನೀನು ನನ್ನ ಹೆಂಡತಿಯಾಗು ವೆಯಾ?" ಎಂದು ಕೇಳಲು ಅವಳಿಗೆ ಆನಂದವೇ ಆಯಿತು. ಅಂಥ ಯುವಕನೂ ಚೆಲುವನೂ ಆದ ಗಂಡ ಯಾವ ಹುಡುಗಿಗೆ ತಾನೇ ಬೇಡ? "ಇವನು ನನ್ನನ್ನು ಮುದುಕಿಗಿಂತಲೂ ಹೆಚ್ಚಾಗಿ ಪ್ರೀತಿಸುವುದು ಖಂಡಿತ" ಎಂದು ಯೋಚಿಸಿ ಅವಳು ಅವನ ಕೈ ಹಿಡಿಯಲು ಸಮ್ಮತಿಸಿದಳು. ಹಾಗೆಯೇ "ನಾನು ನಿನ್ನೊಡನೆ ಸಂತೋಷದಿಂದ ಬಂದುಬಿಡುತ್ತಿದ್ದೆ.

ಆದರೆ ಈ ಸ್ಥಳದಿಂದ ಕೆಳಗಿಳಿದು ಹೋಗುವುದು ಹೇಗೋ ನನಗೆ ತಿಳಿಯದು. ಆದ್ದರಿಂದ ನೀನು ಇನ್ನು ಮೇಲೆ ಬರುವಾಗಲೆಲ್ಲಾ ಒಂದೊಂದು ರೇಷ್ಮೆಯ ಹುರಿಯನ್ನು ತೆಗೆದುಕೊಂಡು ಬಾ. ನಾನು ಅದನ್ನೆಲ್ಲಾ ಸೇರಿಸಿ ಒಂದು ಏಣಿಯನ್ನು ಹೊಸೆಯುತ್ತೇನೆ. ಅದು ಮುಗಿದ ಕೂಡಲೆ ನಾನು ಕೆಳಗಿಳಿದು ಬರುತ್ತೇನೆ. ಆಮೇಲೆ ನೀನು ನನ್ನನ್ನು ನಿನ್ನ ಕುದುರೆಯ ಮೇಲೆ ಕೂಡಿಸಿಕೊಂಡು ಹೋಗಬಹುದು" ಎಂದಳು. ಈ ರೀತಿ ಏಣಿ ಮುಗಿಯುವವರೆಗೂ ಅವನು ಪ್ರತಿದಿನವೂ ಸಂಜೆ ಬಂದು ಹೋಗಬೇಕೆಂದು ಅವರಿಬ್ಬರೂ ಮಾತಾಡಿಕೊಂಡರು. ಸಂಜೆ ಬಂದರೆ ಭಯವಿರಲಿಲ್ಲ. ಏಕೆಂದರೆ ಮುದುಕಿ ಅಲ್ಲಿಗೆ ಹಗಲು ಹೊತ್ತಿನಲ್ಲೇ ಬಂದು ಹೋಗಿಬಿಟ್ಟಿರುತ್ತಿದ್ದಳು. ಇವರ ಗುಟ್ಟು ಸ್ವಲ್ಪಕಾಲ ಮುದುಕಿಗೆ ಗೊತ್ತಾಗಲೇ ಇಲ್ಲ.

ಒಂದು ದಿನ ದುರದೃಷ್ಟದಿಂದ ರೂಪವತಿ ಬುದ್ಧಿಹೀನೆಯಂತೆ "ಅಲ್ಲಮ್ಮಾ, ದೊರೆಯ ಮಗನಿಗಿಂತಲೂ ನೀನೇಕೆ ಮೇಲಕ್ಕೇಳೆದುಕೊಳ್ಳುವಾಗ ಇಷ್ಟೊಂದು ಭಾರವಾಗಿ ತೋರುತ್ತೀಯ? ಅವನಾದರೆ ಒಂದು ಕ್ಷಣದಲ್ಲಿ ನನ್ನ ಹತ್ತಿರಕ್ಕೆ ಬಂದುಬಿಡುತ್ತಾನೆ!" ಎಂದಳು. ಗುಟ್ಟೆಲ್ಲಾ ಹಾಳಾಯಿತು! "ಏನು! ಕೆಟ್ಟಮೋರೆಯವಳೆ! ನಿನ್ನನ್ನು ಪ್ರಪಂಚದಲ್ಲಿ ಯಾರಿಗೂ ಕಾಣದಂತೆ ಇಟ್ಟಿದ್ದೆನೆಂದು ತಿಳಿದುಕೊಂಡಿದ್ದೆ. ನನಗೇ ಮಂಕುಬೂದಿ ಎರಚಿರುವೆಯಲ್ಲಾ!" ಎಂದು ಕೋಪದ ಭರದಲ್ಲಿ ಮಾಟಗಾತಿ ರೂಪವತಿಯ ಕೂದಲನ್ನು ಹಿಡಿದು ಅನೇಕ ಸಾರಿ ಅದನ್ನು ತನ್ನ ಎಡಗೈಯ ಸುತ್ತಲೂ ಸುತ್ತಿ ಬಲಗೈಯಿಂದ ಕತ್ತರಿಯನ್ನು ತೆಗೆದುಕೊಂಡು ಚಕ್ ಎಂದು ಕತ್ತರಿಸಿಬಿಟ್ಟಳು. ಉದ್ದವಾದ ಕೂದಲ ರಾಸಿ ಅವಳ ಕಾಲ ಬಳಿ ಬಿತ್ತು. ಮುದುಕಿಗೆ ಇಷ್ಟರಿಂದ ತೃಪ್ತಿಯಾಗಲಿಲ್ಲ. ಅವಳು ರೂಪವತಿಯನ್ನು ಒಂದು ಮರಳು ಕಾಡಿಗೆ ಕರೆದುಕೊಂಡು ಹೋಗಿ ಬಿಟ್ಟು ಬಂದಳು. ಅಲ್ಲಿ ಆ ಹುಡುಗಿ ಎಷ್ಟೋ ಕಷ್ಟಗಳಿಗೆ ಒಳಗಾಗಿ ದಿನಗಳನ್ನು ನೂಕತೊಡಗಿದಳು.

ಇದೆಲ್ಲಾ ನಡೆದ ದಿನ ಸಾಯಂಕಾಲವೇ ಮುದುಕಿ ರೂಪವತಿಯ ಕೂದಲನ್ನು ಗೋಪುರದ ಕಿಟಕಿಯಲ್ಲಿದ್ದ ಕೊಕ್ಕೆಗೆ ಬಿಗಿದು ಅಲ್ಲೇ

ನಿಂತಿದ್ದಳು. ಎಂದಿನಂತೆ ರಾಜಕುಮಾರ ಬಂದು "ರೂಪವತಿ, ರೂಪವತಿ, ನಿನ್ನ ಕೂದಲನ್ನು ಇಳಿಯಬಿಡು" ಎಂದು ಕೂಗಿದ ಕೂಡಲೆ ಅದನ್ನು ಕೆಳಕ್ಕಿಳಿಸಿದಳು. ಎಂದಿನಂತೆಯೇ ರಾಜಕುಮಾರ ಅದನ್ನು ಹಿಡಿದು ಕೊಂಡು ಮೇಲಕ್ಕೇರಿದ. ಆದರೆ ಅಲ್ಲಿದ್ದುದು ಮಾತ್ರ ಎಂದಿನಂತೆ ರೂಪವತಿಯಲ್ಲ. ಕುರೂಪಿಯಾದ, ಕೋಪದಿಂದ ಹುಚ್ಚಾಗಿದ್ದ ಮುದಿ ಮಾಟಗಾತಿ ಅಲ್ಲಿ ನಿಂತಿದ್ದಳು.

ಅವಳು ತಿರಸ್ಕಾರದಿಂದ "ಆಹಾ! ನಿನ್ನ ನಲ್ಲೆಯ ಜೊತೆಯಲ್ಲಿ ಚಕ್ಕಂದವಾಡಲು ಬಂದಿರುವೆಯಲ್ಲವೆ? ಪಾಪ! ಹಕ್ಕಿ ಗೂಡಿನಲ್ಲಿಲ್ಲ. ಈಗ ಅದು ಹಾಡುವ ಹಾಗೂ ಇಲ್ಲ. ಬೆಕ್ಕುಗಳು ಅದನ್ನು ಹೊತ್ತುಕೊಂಡು ಹೋಗಿವೆ. ಈಗ ಅವು ನಿನ್ನ ಕಣ್ಣುಗಳನ್ನು ಪರಚಿಹಾಕುತ್ತವೆ! ರೂಪವತಿ ಯನ್ನು ಇನ್ನೆಂದಿಗೂ ನೀನು ನೋಡಲಾರೆ" ಎಂದಳು. ಇದನ್ನು ಕೇಳಿದ ರಾಜಕುಮಾರನಿಗೆ ದುಃಖದಿಂದ ದಿಕ್ಕು ತೋಚದಂತಾಯಿತು. ಅದನ್ನು ತಡೆಯಲಾರದೆ ಅವನು ಗೋಪುರದಿಂದ ಕೆಳಕ್ಕೆ ಹಾರಿದ. ಇದರಿಂದ ಅವನ ಪ್ರಾಣ ಹೋಗದಿದ್ದರೂ ಕಣ್ಣುಗಳೆರಡೂ ಹೋದವು. ಏಕೆಂದರೆ ಕಿಟಕಿಯಿಂದ ಹಾರಿದವನು ಅವನು ಕೆಳಗಿದ್ದ ಮುಳ್ಳುಗಳ ಮೇಲೆ ಬಿದ್ದ. ಅವು ಅವನ ಕಣ್ಣುಗಳನ್ನು ಚುಚ್ಚಿಹಾಕಿದವು. ಅನಂತರ ಅವನು ಆ ಕಾಡಿನಲ್ಲೇ ಅಲ್ಲಲ್ಲಿ ಅಡ್ಡಾಡುತ್ತಾ ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ ತನ್ನ ಪ್ರೇಯಸಿಗಾಗಿ ವ್ಯಥೆಪಡುತ್ತಾ ಇದ್ದ.

ಹೀಗೆಯೇ ಅನೇಕ ವರ್ಷ ಕಳೆದವು. ಅವನು ಎಲ್ಲೆಲ್ಲೋ ಅಲೆದಾಡಿ ಕಡೆಗೆ ರೂಪವತಿಯಿದ್ದ ಮರುಭೂಮಿಗೆ ಬಂದ. ಈಗ ರೂಪವತಿಯ ಜೊತೆಗೆ ಇಬ್ಬರು ಮಕ್ಕಳಿದ್ದರು. ಒಂದು ಹೆಣ್ಣು, ಒಂದು ಗಂಡು. ಅವಳ ಧ್ವನಿಯನ್ನು ಕೇಳುತ್ತಲೇ ಅವನಿಗೆ ಅವಳ ಗುರುತು ಸಿಕ್ಕಿತು. ಆದ್ದರಿಂದ ಅವನು ಅವಳಿದ್ದ ಕಡೆಗೆ ನಡೆದ. ಅವನು ಹತ್ತಿರ ಬರಲು ರೂಪವತಿ ತಕ್ಷಣವೇ ಅವನು ಯಾರೆಂಬುದನ್ನು ತಿಳಿದುಕೊಂಡು ಓಡಿಹೋಗಿ ಅವನ ಕತ್ತಿನ ಸುತ್ತ ಕೈಬೀಸಿ ಅಳತೊಡಗಿದಳು. ಅವಳ ಕಣ್ಣುಗಳಿಂದ ಹರಿದ ಎರಡು ಹನಿಗಳು ಅವನ ಕಣ್ಣುಗಳ ಮೇಲೆ ಬಿದ್ದವು. ಆಶ್ಚರ್ಯ! ಕೂಡಲೆ ಅವನಿಗೆ ಮತ್ತೆ ಕಣ್ಣು ಬಂದವು! ಮೊದಲಿನಂತೆಯೇ ಎಲ್ಲವೂ

ಅವನಿಗೆ ಕಾಣಿಸಲಾರಂಭಿಸಿತು. ಸಂತೋಷದಿಂದ ಉಬ್ಬಿ ನಲಿದು ಅವರೆಲ್ಲರೂ ಅವನ ರಾಜ್ಯಕ್ಕೆ ಹೊರಟರು. ಅಲ್ಲಿ ಅವರಿಗೆ ಸುಸ್ವಾಗತ ದೊರೆಯಿತು. ಆಮೇಲೆ ಎಲ್ಲರೂ ಸುಖವಾಗಿ ಬಹಳ ಕಾಲ ಬದುಕಿ ಬಾಳಿದರು.

# ದನಕಾಯುವ ಹುಡುಗಿ

ಒಂದು ಊರಿನಲ್ಲಿ ಒಬ್ಬ ರಾಣಿಯಿದ್ದಳು. ಅವಳ ಗಂಡ ತೀರಿ ಹೋಗಿ ಆಗಲೇ ಬಹಳ ದಿನಗಳಾಗಿತ್ತು. ಅವಳಿಗೆ ಒಬ್ಬ ಮಗಳಿದ್ದಳು. ರಾಜ ಮರಣ ಹೊಂದಿದಾಗಿನಿಂದಲೂ ಪ್ರಜೆಗಳ ಪೋಷಣೆಯನ್ನೂ ಮಗಳ ಪೋಷಣೆಯನ್ನೂ ರಾಣಿಯೇ ಮಾಡುತ್ತಿದ್ದಳು.

ಕೆಲವು ವರ್ಷಗಳು ಕಳೆದವು. ರಾಜಕುಮಾರಿ ಬೆಳೆದು ದೊಡ್ಡವಳಾದಳು. ಅವಳಿಗೆ ಮದುವೆಯಾಗಬೇಕಾದ ವಯಸ್ಸು ಬಂತು. ಮಗಳಿಗೆ ಸರಿಯಾದ ಗಂಡನನ್ನು ಹುಡುಕಲು ರಾಣಿ ಸುತ್ತಮುತ್ತಣ ರಾಜ್ಯಗಳಿಗೆಲ್ಲಾ ಮಂತ್ರಿಗಳನ್ನು ಕಳುಹಿಸಿಕೊಟ್ಟಳು. ಬಹಳ ಹುಡುಕಾಡಿದ ನಂತರ, ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಒಬ್ಬ ರಾಜನ ಮಗನಿಗೆ ರಾಜಕುಮಾರಿಯನ್ನು ಕೊಟ್ಟು ಲಗ್ನ ಮಾಡಬೇಕೆಂದು ನಿಷ್ಕರ್ಷೆಯಾಯಿತು. ಮದುವೆ ಗಂಡಿನ ಮನೆಯಲ್ಲೇ ನಡೆಯಬೇಕೆಂದು ತೀರ್ಮಾನಿಸಿದರು.

ಮದುವೆಯ ದಿನ ಸಮೀಪಿಸಿತು. ರಾಜಕುಮಾರಿಯನ್ನು ಅವಳ ಗಂಡನ ಮನೆಗೆ ಕಳುಹಿಸಿಕೊಡಬೇಕಾಯಿತು. ಅವಳು ಹೊರಡಲು ಸಿದ್ಧಳಾದಳು. ರಾಣಿ ಅನೇಕ ಒಡವೆಗಳನ್ನೂ ಮುತ್ತು ರತ್ನಗಳನ್ನೂ ಬಟ್ಟೆಗಳನ್ನೂ ಗಂಟುಕಟ್ಟಿದಳು. ರಾಣಿ ರಾಜ್ಯವನ್ನು ಬಿಟ್ಟು ಹೋಗುವಂತಿರಲಿಲ್ಲ. ಆದ್ದರಿಂದ ರಾಜಕುಮಾರಿಯ ಜೊತೆಯಲ್ಲಿ ಅವಳ ಸೇವಕಿಯೊಬ್ಬಳು ಹೋಗಬೇಕೆಂದು ಅಪ್ಪಣೆಯಾಯಿತು. ರಾಜಕುಮಾರಿಗೂ ಸೇವಕಿಗೂ ಪ್ರಯಾಣಕ್ಕೆಂದು ಎರಡು ಕುದುರೆಗಳು ಗೊತ್ತಾದವು. ರಾಜಕುಮಾರಿಯ ಕುದುರೆಯ ಹೆಸರು ಮಹಾಲಕ್ಷ್ಮಿ. ಅದು ಮನುಷ್ಯರಂತೆ ಮಾತಾಡುತ್ತಿತ್ತು.

ಮಗಳು ಅರಮನೆಯನ್ನು ಬಿಟ್ಟು ಹೊರಡುವ ಸಮಯ ಬಂದಾಗ ರಾಣಿಗೆ ಬಹಳ ದುಃಖವಾಯಿತು. ಅವಳು ಮಲಗುವ ಕೋಣೆಯಲ್ಲಿ ಹಾಸುಗೆಯ ಮೇಲೆ ತಲೆದಿಂಬಿನ ಕೆಳಗೆ ಒಂದು ಉಂಗುರವಿತ್ತು. ಅವಳು ಅದನ್ನು ತೆಗೆದುಕೊಂಡು ಬಂದು ರಾಜಕುಮಾರಿಯ ಕೈಬೆರಳಿಗಿಟ್ಟು "ಮಗು, ಇದನ್ನು ಜೋಪಾನವಾಗಿ ಕಾಪಾಡಿಕೊ. ನಿನಗೆ ಏನಾದರೂ ಕಷ್ಟ ಬಂದರೆ ಇದು ನಿನಗೆ ಸಹಾಯ ಮಾಡುತ್ತದೆ" ಎಂದಳು. ಅನಂತರ ರಾಜಕುಮಾರಿಯೂ ಸೇವಕಿಯೂ ತಮ್ಮ ತಮ್ಮ ಕುದುರೆಗಳ ಮೇಲೆ ಕುಳಿತು ಹೊರಟರು. ಆ ದಿವಸ ಅರಮನೆಯಲ್ಲಿ ಯಾರ ಕಣ್ಣಿನಲ್ಲಿ ನೋಡಿದರೂ ನೀರು ಕಾಲುವೆ ಹರಿದ ಹಾಗೆ ಸುರಿಯುತ್ತಿತ್ತು.

ಅಲ್ಲಿಂದ ರಾಜಕುಮಾರಿಯು ಗಂಡನ ಮನೆಗೆ ಎರಡು ಮೂರು ದಿನ ಪ್ರಯಾಣ ಮಾಡಬೇಕಾಗಿತ್ತು. ಅವರು ಒಂದು ನದಿಯ ತೀರದ ಮೇಲೆ ಹೋಗುತ್ತಿದ್ದಾಗ ರಾಜಕುಮಾರಿಗೆ ಬಹಳ ಬಾಯಾರಿಕೆಯಾಯಿತು. ಅವಳು ಸೇವಕಿಯ ಕಡೆಗೆ ತಿರುಗಿ "ಸಖಿ, ಇಳಿದು ಹೋಗಿ ಒಂದು ಬಟ್ಟಲು ನೀರು ತಂದುಕೊಡು ಬಾಯಾರಿಕೆಯಾಗುತ್ತಿದೆ" ಎಂದಳು. ಸೇವಕಿ "ನಾನು ಹೋಗುವುದಿಲ್ಲ. ಬೇಕಾದರೆ ನೀನೇ ಹೋಗಿ ಕುಡಿದು ಬಾ. ಇನ್ನು ಮೇಲೆ ನಾನು ನಿನ್ನ ಸೇವಕಿಯೂ ಅಲ್ಲ, ನೀನು ನನ್ನ ಯಜಮಾನಿಯೂ ಅಲ್ಲ" ಎಂದು ಗರ್ವದಿಂದ ಉತ್ತರ ಕೊಟ್ಟಳು. ರಾಜಕುಮಾರಿಗೆ ತಡೆಯಲಾಗದಷ್ಟು ಬಾಯಾರಿಕೆಯಾಗಿತ್ತು. ಆದ್ದರಿಂದ ಅವಳು ತಾನೇ ನೀರಿನ ಹತ್ತಿರಕ್ಕೆ ಹೋಗಿ ಬೊಗಸೆಯಲ್ಲಿ ನೀರನ್ನು ತೆಗೆದು ಕೊಂಡು ಕುಡಿದಳು. ಗಾಬರಿಯಿಂದ ಅವಳಿಗೆ ತನ್ನ ಬಂಗಾರದ ಬಟ್ಟಲನ್ನು ತಂದು ಅದರಲ್ಲಿ ನೀರನ್ನು ತುಂಬಿಕೊಂಡು ಕುಡಿಯಬೇಕು ಎಂದು ಕೂಡ ತೋಚಲಿಲ್ಲ. ನೀರು ಕುಡಿದುದು ಆದ ಮೇಲೆ ಅವಳಿಗೆ ಬಹಳ ಅಳು ಬಂತು. ಅವಳು "ನನ್ನ ಗತಿ ಇನ್ನೂ ಏನಾಗುತ್ತದೆಯೋ" ಎಂದು ಅತ್ತಳು. ಅದಕ್ಕೆ ಅವಳ ಕೈಯಲ್ಲಿದ್ದ ಉಂಗುರ "ಅಯ್ಯೋ, ಈ ಸಮಾಚಾರ ನಿಮ್ಮ ತಾಯಿಗೆ ತಿಳಿದರೆ ಎಷ್ಟು ವ್ಯಥೆ ಪಡುವಳೋ, ಪಾಪ!" ಎಂದಿತು. ಇಷ್ಟಾದರೂ ರಾಜಕುಮಾರಿ ಸೇವಕಿಗೆ ಎದುರು ಮಾತಾಡಲಿಲ್ಲ. ಮೌನವಾಗಿ ಮತ್ತೆ ಕುದುರೆಯನ್ನು ಹತ್ತಿ ಮುಂದೆ ಹೊರಟಳು.

ಅವರು ಹಾಗೆಯೇ ಹೋಗಲು ಮಧ್ಯಾಹ್ನವಾಯಿತು. ಸೂರ್ಯ ನೆತ್ತಿಯ ಮೇಲಕ್ಕೆ ಬಂದ. ಬಿಸಿಲು ಜೋರಾಯಿತು. ರಾಜಕುಮಾರಿಗೆ ಮತ್ತೊಮ್ಮೆ ಬಾಯಾರಿಕೆ ಬಹಳವಾಯಿತು. ಅಷ್ಟರಲ್ಲಿ ಒಂದು ನದಿ ಸಿಕ್ಕಿತು. ರಾಜಕುಮಾರಿ ಹಿಂದೆ ಸೇವಕಿ ಆಡಿದ್ದ ಅಹಂಕಾರದ ಮಾತನ್ನು ಮರೆತುಬಿಟ್ಟು ಅವಳನ್ನು "ಸಖಿ, ಇಳಿದು ಹೋಗಿ ನನ್ನ ಚಿನ್ನದ ಬಟ್ಟಲಲ್ಲಿ ನೀರು ತೆಗೆದುಕೊಂಡು ಬಾ, ಬಾಯಾರಿಕೆಯಾಗುತ್ತಿದೆ" ಎಂದಳು. ಸೇವಕಿ ಈ ಸಾರಿ ಮೊದಲಿಗಿಂತಲೂ ಹೆಚ್ಚು ಗರ್ವದಿಂದ "ನಾನು ಹೋಗುವುದಿಲ್ಲ. ಬೇಕಾದರೆ ನೀನೇ ಹೋಗಿ ಕುಡಿದು ಬಾ. ಇನ್ನುಮೇಲೆ ನಾನು ಸೇವಕಿಯಲ್ಲ, ನೀನು ಯಜಮಾನಿಯಲ್ಲ" ಎಂದಳು. ರಾಜಕುಮಾರಿ ತಾನೇ ಇಳಿದು ನೀರಿನ ಬಳಿಗೆ ಹೋಗಿ ಬಗ್ಗಿ ಬೊಗಸೆಯಲ್ಲಿ ನೀರು ತೆಗೆದುಕೊಂಡು ಕುಡಿಯುತ್ತಾ "ನನ್ನ ಗತಿ ಇನ್ನೂ ಏನೇನಾಗುತ್ತದೆಯೋ" ಎಂದು ಅತ್ತಳು. ಅದಕ್ಕೆ ಅವಳ ಕೈಯಲ್ಲಿದ್ದ ಉಂಗುರ "ಅಯ್ಯೋ, ಈ ವರ್ತಮಾನ ನಿಮ್ಮ ತಾಯಿಗೆ ತಿಳಿದರೆ ಎಷ್ಟು ವ್ಯಥೆಪಡುತ್ತಾಳೋ, ಪಾಪ!" ಎಂದಿತು. ಆದರೆ ಅವಳ ದುರದೃಷ್ಟ— ಇನ್ನೊಂದು ಸಾರಿ ನೀರು ತೆಗೆದುಕೊಳ್ಳುವುದಕ್ಕಾಗಿ ಕೈ ಚಾಚಿದಳು, ಉಂಗುರ ಬೆರಳಿನಿಂದ ಕಳಚಿಕೊಂಡು ನೀರಿನಲ್ಲಿ ಬಿದ್ದುಬಿಟ್ಟಿತು. ರಾಜಕುಮಾರಿಗೆ ಬಹಳ ಭಯವಾಯಿತು. ಸೇವಕಿಯೂ ರಾಜಕುಮಾರಿಯ ಉಂಗುರ ನೀರಿನಲ್ಲಿ ಬಿದ್ದುದನ್ನು ನೋಡಿದಳು. ಅವಳಿಗೆ ಬಹಳ ಸಂತೋಷವಾಯಿತು. ಅವಳು "ಇನ್ನು ರಾಜಕುಮಾರಿ ನನ್ನ ಕೈಗೆ ಸಿಕ್ಕಿದಳು. ಆ ಹಾಳು ಉಂಗುರ ಹೋಯಿತಲ್ಲಾ!" ಎಂದುಕೊಂಡಳು. ರಾಜಕುಮಾರಿ ನೀರು ಕುಡಿದು ಹಿಂದಿರುಗಿ ಬಂದು ಮತ್ತೆ ಕುದುರೆಯನ್ನು ಏರಲು ಹೋದಾಗ ಸೇವಕಿ "ಇನ್ನು ಮೇಲೆ ನಾನು ನಿನ್ನ ಕುದುರೆಯ ಮೇಲೆ ಕುಳಿತುಕೊಳ್ಳುತ್ತೇನೆ, ನೀನು ನನ್ನ ಕುದುರೆಯ ಮೇಲೆ ಕುಳಿತುಕೊ" ಎಂದಳು. ಪಾಪ, ರಾಜಕುಮಾರಿ ತನ್ನ ಕುದುರೆ ಮಹಾಲಕ್ಷ್ಮಿಯನ್ನು ಸೇವಕಿಗೆ ಬಿಟ್ಟುಕೊಟ್ಟು ತಾನು ಅವಳ ಸಾಧಾರಣವಾದ ಕುದುರೆಯ ಮೇಲೆ ಕುಳಿತುಕೊಳ್ಳಬೇಕಾಯಿತು. ಹೀಗೆಯೇ ಇನ್ನೂ ಸ್ವಲ್ಪ ದೂರ ಹೋದಮೇಲೆ ಸೇವಕಿ ರಾಜಕುಮಾರಿಯ ಬಟ್ಟೆ

ಗಳನ್ನೆಲ್ಲಾ ಕಿತ್ತುಕೊಂಡು ತಾನು ಧರಿಸಿ, ತನ್ನ ಬಟ್ಟೆಗಳನ್ನು ಅವಳಿಗೆ ಕೊಟ್ಟಳು.

ಅಷ್ಟುಹೊತ್ತಿಗೆ ರಾಜಕುಮಾರಿಯ ಗಂಡನ ಊರು ಸಮೀಪಿಸಿತು. ಆಗ ಸೇವಕಿ ರಾಜಕುಮಾರಿಯ ಕಡೆಗೆ ತಿರುಗಿ "ದಾರಿಯಲ್ಲಿ ಏನು ನಡೆಯಿತು ಎಂದು ಯಾರಿಗಾದರೂ ಹೇಳಿದರೆ ನಿನ್ನನ್ನು ಕೊಂದುಬಿಡುತ್ತೇನೆ" ಎಂದು ಬೆದರಿಸಿದಳು. ಅವಳು ಈಗ ಏರಿ ಕುಳಿತಿದ್ದುದು ರಾಜಕುಮಾರಿಯ ಕುದುರೆ, ಮಹಾಲಕ್ಷ್ಮಿ. ಮಹಾಲಕ್ಷ್ಮಿ ಅವಳು ಆಡಿದ ಮಾತನ್ನೆಲ್ಲಾ ಅರ್ಥಮಾಡಿಕೊಂಡಿತು. ಅನಂತರ ಅವರು ಗಂಡಿನ ಅರಮನೆಗೆ ಬಂದರು. ರಾಜಕುಮಾರ ಅವರಿಗಾಗಿ ಬಾಗಿಲಲ್ಲೇ ಕಾದಿದ್ದ. ಅವನು ದೊರೆಯ ಮಗಳಂತೆ ಬಟ್ಟೆಗಳನ್ನು ಉಟ್ಟಿದ್ದ ಸೇವಕಿಯನ್ನು ಕುದುರೆಯಿಂದ ಇಳಿಸಿ ಅರಮನೆಯ ಒಳಭಾಗಕ್ಕೆ ಕರೆದುಕೊಂಡು ಹೋದ. ಅವಳೇ ತನ್ನ ಹೆಂಡತಿಯಾಗಬೇಕಾದ ಹುಡುಗಿ ಎಂದು ತಿಳಿದು ಅವನು ಮೋಸಹೋದ. ನಿಜವಾದ ರಾಜಕುಮಾರಿ ಹೊರಗಡೆ ಅಂಗಳದಲ್ಲೇ ನಿಂತಳು. ಅವಳನ್ನು ಮಾತಾಡಿಸುವವರೇ ಇರಲಿಲ್ಲ.

ಆದರೆ ಗಂಡಿನ ತಂದೆ, ದೊಡ್ಡ ರಾಜ, ಅರಮನೆಯ ಮಹಡಿಯ ಮೇಲೆ ನಿಂತು ನೋಡುತ್ತಿದ್ದ. ರಾಜಕುಮಾರಿ ಅವನ ಕಣ್ಣಿಗೆ ಬಿದ್ದಳು. ಅವನು "ಈ ಹುಡುಗಿ ಯಾರಿರಬಹುದು? ಒಳ್ಳೆ ಚೆಲುವೆಯಾಗಿದ್ದಾಳೆ, ಇವಳು ಸೇವಕಿ ಎಂದರೆ ನಂಬುವ ಹಾಗೆಯೇ ಇಲ್ಲ!" ಎಂದುಕೊಂಡು. ಒಳಗೆ ಹೋಗಿ ಮದುವಣಗಿತ್ತಿಯಾಗಿ ಮೆರೆಯುತ್ತಿದ್ದ ಸೇವಕಿಯನ್ನು "ಅಂಗಳದಲ್ಲಿ ನಿಂತಿರುವ ಆ ಹುಡುಗಿ ಯಾರು?" ಎಂದು ಕೇಳಿದ. ಅವಳು "ಆ ಹುಡುಗಿಯೆ? ಅವಳೂ ಅವಳ ತಾಯಿಯೂ ನಮ್ಮ ಮನೆಯಲ್ಲಿ ಚಾಕರಿ ಮಾಡಿಕೊಂಡಿದ್ದರು. ದಾರಿಯಲ್ಲಿ ಬೇಜಾರು ಕಳೆಯಲು ನನ್ನ ಜೊತೆಗೆ ಇರಲಿ ಎಂದು ಇವಳನ್ನು ಕರೆದುಕೊಂಡು ಬಂದೆ. ಅವಳಿಗೆ ಏನಾದರೂ ಒಂದು ಕೆಲಸವಿದ್ದರೆ ಕೊಡಿ, ಮಾಡುತ್ತಿರಲಿ" ಎಂದಳು. ಇಂಥ ಹುಡುಗಿಗೆ ಯಾವ ಕೆಲಸ ಕೊಡಬೇಕೆಂದು ರಾಜನಿಗೆ ತೋಚಲಿಲ್ಲ. ಬಹಳ ಹೊತ್ತು ಯೋಚಿಸಿ ಕಡೆಗೆ ಅವನು "ನಮ್ಮ ದನಗಳನ್ನೆಲ್ಲಾ ಕಾಯಲು ಒಬ್ಬ ಹುಡುಗನಿದ್ದಾನೆ. ಈ ಹುಡುಗಿ ಅವನ ಜೊತೆಯಲ್ಲಿದ್ದು

ಕೊಂಡು ಪ್ರತಿದಿನವೂ ತಾನೂ ದನಗಳನ್ನು ಆಡಿಸಿಕೊಂಡು ಬರುತ್ತಿರಲಿ" ಎಂದ. ರಾಜಕುಮಾರಿ ದನಕಾಯುವ ಹುಡುಗನ ಸಂಗಾತಿಯಾದಳು. ಅವನ ಹೆಸರು ಕರಿಯ.

ಅನಂತರ ಮದುವಣಗಿತ್ತಿಯಾಗಿದ್ದ ಮೋಸಗಾತಿ ರಾಜಕುಮಾರನ ಹತ್ತಿರ ಹೋಗಿ "ನನಗೆ ನಿನ್ನಿಂದ ಒಂದು ಸಣ್ಣ ಕೆಲಸವಾಗಬೇಕು" ಎಂದಳು. ಅವನು "ಏನು ಹೇಳು. ಯಾವ ಕೆಲಸ ಬೇಕಾದರೂ ಮಾಡಿಕೊಡುತ್ತೇನೆ" ಎಂದ. ಅವಳು "ನಾನು ಸವಾರಿ ಮಾಡಿಕೊಂಡು ಬಂದ ಆ ಹಾಳುಕುದುರೆಯನ್ನು ಕಟುಕರಿಗೆ ಹೇಳಿ ಕೊಲ್ಲಿಸಿಬಿಡು. ದಾರಿಯಲ್ಲಿ ಅದು ನನಗೆ ಬಹಳ ತೊಂದರೆ ಕೊಟ್ಟಿತು. ಇನ್ನು ಅದರ ಮುಖ ನೋಡಲು ನನಗೆ ಇಷ್ಟವಿಲ್ಲ" ಎಂದಳು. ನಿಜವಾದ ಸಂಗತಿ ಏನೆಂದರೆ, ಮಹಾಲಕ್ಷ್ಮಿಗೆ ಮನುಷ್ಯರಂತೆಯೇ ಮಾತು ಬರುತ್ತಿದ್ದುದರಿಂದ ಅದು ನಡೆದಿದ್ದುದನ್ನೆಲ್ಲಾ ಎಲ್ಲಿ ಎಲ್ಲರಿಗೂ ಹೇಳಿಬಿಡುವುದೋ ಎಂಬ ಹೆದರಿಕೆ ಅವಳನ್ನು ಪೀಡಿಸುತ್ತಿತ್ತು. ರಾಜಕುಮಾರ ಅವಳು ಹೇಳಿದಂತೆಯೇ ಮಾಡಿದ. ಅವನ ಅಪ್ಪಣೆಯ ಪ್ರಕಾರ ಕಟುಕರು ಕುದುರೆಯನ್ನು ಕೊಂದುಬಿಟ್ಟರು. ಆ ದಿವಸವೇ ಆ ಮೋಸಗಾತಿಗೂ ರಾಜಕುಮಾರನಿಗೂ ಮದುವೆ ನಡೆದು ಹೋಯಿತು.

ತನ್ನ ಕುದುರೆ ಮಹಾಲಕ್ಷ್ಮಿ ಕೊಲೆಯಾದ ವರ್ತಮಾನ ನಿಜವಾದ ರಾಜಕುಮಾರಿಗೆ ತಿಳಿಯಿತು. ಅವಳು ವ್ಯಸನದಿಂದ ಬಹಳ ಹೊತ್ತು ಅತ್ತು ಕಟುಕರ ಬಳಿಗೆ ಓಡಿಹೋಗಿ, ಆ ಕುದುರೆಯ ತಲೆಯನ್ನು ಊರಿನ ಕೋಟೆಯ ಬಾಗಿಲ ಹಿಂದೆ ಗೋಡೆಯ ಮೇಲೆ ತೂಗಿಹಾಕಬೇಕೆಂದು ಬೇಡಿಕೊಂಡಳು. ದನಗಳನ್ನು ಮೇಯಿಸಲು ಪ್ರತಿದಿನವೂ ಅವಳು ಈ ಬಾಗಿಲ ಮೂಲಕವೇ ಕೋಟೆಯಿಂದ ಹೊರಗೆ ಹೋಗಬೇಕಾಗಿತ್ತು. ಆದ್ದರಿಂದ ದಿವಸಕ್ಕೆ ಎರಡುಸಾರಿಯಾದರೂ—ಹೋಗುವಾಗ ಒಂದು ಸಾರಿ, ಹಿಂದಿರುಗಿ ಬರುವಾಗ ಒಂದು ಸಾರಿ—ತನ್ನನ್ನು ಪ್ರೀತಿಸುತ್ತಿದ್ದ ಕುದುರೆಯ ತಲೆಯನ್ನು ನೋಡಬಹುದು ಎಂದು ಅವಳ ಆಸೆ. ಅವಳ ದೈನ್ಯತೆಯನ್ನು ಕಂಡು ಕಟುಕರಿಗೆ ಕೂಡ ಕರುಣೆಯುಂಟಾಯಿತು. ಅವರು

ಅವಳ ಅಪೇಕ್ಷೆಯಂತೆ ಕುದುರೆಯ ತಲೆಯನ್ನು ಕತ್ತರಿಸಿ ಕೋಟೆಯ ಬಾಗಿಲ ಹಿಂದೆ ಗೋಡೆಗೆ ತೂಗಿಹಾಕಿದರು.

ಮಾರನೆಯ ದಿನ ಬೆಳಗ್ಗೆ ಕರಿಯನೂ ರಾಜಕುಮಾರಿಯೂ ದನಗಳನ್ನು ಮೇಯಿಸಲು ಹೊರಟರು. ಕೋಟೆಯ ಬಾಗಿಲಿಗೆ ಬಂದ ಕೂಡಲೆ ರಾಜಕುಮಾರಿ ಬಾಗಿಲ ಹಿಂದಿದ್ದ ಕುದುರೆಯ ತಲೆಯನ್ನು ನೋಡಿ ದುಃಖದಿಂದ "ಮಹಾಲಕ್ಷ್ಮಿ, ಮಹಾಲಕ್ಷ್ಮಿ, ನಿನಗೆ ಈ ಗತಿ ಬಂತೆ!" ಎಂದಳು. ಆ ತಲೆ "ಮದುವಣಗಿತ್ತಿ, ಮದುವಣಗಿತ್ತಿ, ನಿನಗೆ ಈ ಗತಿ ಬಂತೆ! ಪಾಪ, ಈ ವರ್ತಮಾನ ನಿಮ್ಮ ತಾಯಿಗೆ ತಿಳಿದರೆ ಎಷ್ಟು ವ್ಯಥೆಪಡುತ್ತಾಳೋ ಆಕೆ!" ಎಂದಿತು.

ಅನಂತರ ಅವರಿಬ್ಬರೂ ಊರ ಹೊರಗಿನ ಹುಲ್ಲುಗಾವಲಿಗೆ ದನಗಳನ್ನು ಹೊಡೆದುಕೊಂಡು ಹೋದರು. ಅಲ್ಲಿ ರಾಜಕುಮಾರಿ ಒಂದು ದಿಣ್ಣೆಯ ಮೇಲೆ ಕುಳಿತು ಹೆರಳುಹಾಕಿಕೊಳ್ಳಲು ತನ್ನ ತಲೆಯ ಕೂದಲನ್ನು ಬಿಚ್ಚಿದಳು. ಪ್ರತಿಯೊಂದು ಕೂದಲೂ ಬಿಸಿಲಿನಲ್ಲಿ ಅಚ್ಚ ಬೆಳ್ಳಿಯ ಎಳೆಯಂತೆ ಹೊಳೆಯತೊಡಗಿತು. ಇದನ್ನು ನೋಡಿದ ಕರಿಯನಿಗೆ ಆಶ್ಚರ್ಯವಾಯಿತು. ಆಸೆಯಿಂದ ಅವನ ಕಣ್ಣು ಅರಳಿದವು. ಅವನು ಕೂದಲನ್ನು ಹಿಡಿದು ಕೀಳಲು ಹೋದ. ಆಗ ರಾಜಕುಮಾರಿ "ಗಾಳಿಯೇ, ಬೀಸಿ ಬಾ, ಬೇಗ ಬಾ; ಕರಿಯನ ಟೋಪಿ ಹಾರಿಹೋಗಲಿ. ನಾನು ನನ್ನ ಕೂದಲನ್ನೆಲ್ಲಾ ಬಾಚಿ ಜಡೆ ಹೆಣೆದುಕೊಳ್ಳುವವರೆಗೂ ಅವನ ಟೋಪಿ ಸಿಕ್ಕದಿರಲಿ" ಎಂದು ಕೂಗಿಕೊಂಡಳು. ಕೂಡಲೆ ಗಾಳಿ ಜೋರಾಗಿ ಬೀಸಿ ಬಂದಿತು. ಕರಿಯನ ಟೋಪಿ ಹಾರಿಹೋಯಿತು. ಅವನು ಅದರ ಹಿಂದೆ ಓಡಿದ. ಅದು ದೂರದಲ್ಲಿದ್ದ ಗುಡ್ಡಗಳ ಮೇಲೆ ಹಾರಿ ಬಹಳ ಹೊತ್ತಿನವರೆಗೆ ಅವನ ಕೈಗೆ ಸಿಕ್ಕಲಿಲ್ಲ. ಅವನು ಅದನ್ನು ಹಿಡಿದು ಹಿಂತಿರುಗಿ ಬರುವ ವೇಳೆಗೆ ರಾಜಕುಮಾರಿ ಕೂದಲನ್ನೆಲ್ಲಾ ಬಾಚಿ ಜಡೆ ಹೆಣೆದುಕೊಂಡಿದ್ದಳು. ಇದರಿಂದ ಕರಿಯನಿಗೆ ಬಹಳ ಕೋಪ ಬಂತು. ಅವನು ಆಮೇಲೆ ಅವಳ ಜೊತೆಯಲ್ಲಿ ಮಾತನ್ನೇ ಆಡಲಿಲ್ಲ. ಹಾಗೂ ಹೀಗೂ ಕಾಲಕಳೆದು ಸಂಜೆಯಾದ ಮೇಲೆ ದನಗಳೊಡನೆ ಇಬ್ಬರೂ ಮನೆಗೆ ಬಂದರು.

ಮರುದಿನ ಅವರು ದನಗಳ ಹಿಂದೆ ಕೋಟೆಯ ಬಾಗಿಲಿಗೆ ಬಂದ

ಒಡನೆ ರಾಜಕುಮಾರಿ ಹಿಂದಿನ ದಿವಸ ಮಾಡಿದ್ದಂತೆಯೇ ಬಾಗಿಲ ಹಿಂದಿದ್ದ ಕುದುರೆಯ ತಲೆಯನ್ನು ನೋಡಿ "ಮಹಾಲಕ್ಷ್ಮಿ, ಮಹಾಲಕ್ಷ್ಮಿ, ನಿನಗೆ ಈ ಗತಿ ಬಂತೆ?" ಎಂದಳು. ಕುದುರೆಯ ತಲೆ "ಮದುವಣಗಿತ್ತಿ, ಮದುವಣಗಿತ್ತಿ, ನಿನಗೆ ಈ ಗತಿ ಬಂತೆ? ಪಾಪ, ಈ ವರ್ತಮಾನ ನಿಮ್ಮ ತಾಯಿಗೆ ತಿಳಿದರೆ ಎಷ್ಟು ವ್ಯಥೆಪಡುತ್ತಾಳೋ ಆಕೆ!" ಎಂದಿತು. ಅನಂತರ ಅವಳೂ ಕರಿಯನೂ ದನಗಳನ್ನು ಹೊಡೆದುಕೊಂಡು ಹುಲ್ಲುಗಾವಲಿಗೆ ಬಂದರು. ಹಿಂದಿನ ದಿನದಂತೆಯೇ ರಾಜಕುಮಾರಿ ಹೆರಳು ಹಾಕಿಕೊಳ್ಳಲು ತಲೆಯ ಕೂದಲನ್ನು ಬಿಚ್ಚಿದಳು. ಕೂದಲೆಳೆಗಳನ್ನು ಕಿತ್ತುಕೊಳ್ಳಲು ಕರಿಯ ಅವಳ ಹತ್ತಿರಕ್ಕೆ ಹೋದ. ಅವಳು "ಗಾಳಿಯೇ, ಬೀಸಿ ಬಾ, ಬೇಗ ಬಾ; ಕರಿಯನ ಟೋಪಿ ಹಾರಿಹೋಗಲಿ. ನಾನು ನನ್ನ ಕೂದಲನ್ನೆಲ್ಲಾ ಬಾಚಿ ಜಡೆ ಹೆಣೆದುಕೊಳ್ಳುವವರೆಗೂ ಅವನ ಟೋಪಿ ಸಿಕ್ಕದಿರಲಿ" ಎಂದು ಕೂಗಿದಳು. ಕೂಡಲೆ ಗಾಳಿ ಬೀಸಿ ಬಂದು ಅವನ ಟೋಪಿಯನ್ನು ಗುಡ್ಡಗಳ ಮೇಲೆಲ್ಲಾ ಹಾರಿಸಿಕೊಂಡು ಹೋಯಿತು. ಅವನು ಅದನ್ನು ಹಿಡಿಯಲು ಓಡಿದ. ಅವನು ಹಿಂದಿರುಗಿ ಬರುವ ಹೊತ್ತಿಗೆ ರಾಜಕುಮಾರಿ ಹೆರಳು ಹಾಕಿಕೊಳ್ಳುವುದು ಪೂರ್ತಿಯಾಗಿ ಮುಗಿದಿತ್ತು. ಸಂಜೆಯಾಗುವ ವರೆಗೂ ಇಬ್ಬರೂ ಬಯಲಿನಲ್ಲೇ ಇದ್ದು ಮನೆಗೆ ಬಂದರು.

ಆ ದಿನ ರಾತ್ರಿ ಕರಿಯ ದೊಡ್ಡರಾಜನ ಬಳಿಗೆ ಹೋಗಿ "ಆ ಹಾಳು ಹುಡುಗಿ ಇನ್ನು ಮೇಲೆ ನನ್ನ ಜೊತೆಯಲ್ಲಿ ದನಗಳನ್ನು ಮೇಯಿಸುವುದಕ್ಕೆ ಬರುವುದು ಬೇಡ" ಎಂದ. ರಾಜ "ಏಕೆ?" ಎಂದ. ಕರಿಯ "ಅವಳು ಹಗಲೆಲ್ಲಾ ನನ್ನನ್ನು ಸುಮ್ಮನೆ ಒಂದೇ ಸಮನಾಗಿ ಪೀಡಿಸುತ್ತಾಳೆ"–ಎಂದ. ಆಗ ರಾಜ ನಡೆದ ಸಂಗತಿಯನ್ನೆಲ್ಲಾ ತನಗೆ ತಪ್ಪದೆ ಹೇಳಬೇಕೆಂದು ಅವನನ್ನು ಬಲವಂತಪಡಿಸಿದ. ಕರಿಯ "ನಾವು ಬೆಳಗ್ಗೆ ಕೋಟೆಯ ಬಾಗಿಲಲ್ಲಿ ಹೋಗುವಾಗ ಅವಳು ಅಳುತ್ತಾ ಬಾಗಿಲ ಹಿಂದೆ ಗೋಡೆಯ ಮೇಲಿರುವ ಒಂದು ಕುದುರೆಯ ತಲೆಯನ್ನು ಮಾತಾಡಿಸುತ್ತಾಳೆ. ಅವಳು "ಮಹಾಲಕ್ಷ್ಮಿ, ಮಹಾಲಕ್ಷ್ಮಿ, ನಿನಗೆ ಈ ಗತಿ ಬಂತೆ?" ಎನ್ನುತ್ತಾಳೆ. ಅದು "ಮದುವಣಗಿತ್ತಿ, ಮದುವಣಗಿತ್ತಿ, ನಿನಗೆ ಈ ಗತಿ ಬಂತೆ? ಪಾಪ, ಈ ವರ್ತಮಾನ ನಿಮ್ಮ ತಾಯಿಗೆ ತಿಳಿದರೆ ಎಷ್ಟು ವ್ಯಥೆಪಡುತ್ತಾಳೋ

ಆಕೆ!" ಎನ್ನುತ್ತದೆ. ನಾವು ಹುಲ್ಲುಗಾವಲಿಗೆ ಹೋದಕೂಡಲೆ ಆವಳು ತನ್ನ ಕೂದಲನ್ನು ಬಾಚಿಕೊಳ್ಳಲು ಬಿಚ್ಚುತ್ತಾಳೆ. ಆಗ ಅವಳ ತಲೆ ಬೆಳ್ಳಿಯಂತೆ ಹೊಳೆಯುತ್ತದೆ. ಆಗ ಅವಳು 'ಗಾಳಿಯೇ ಬೀಸಿ ಬಾ' ಎನ್ನುತ್ತಾಳೆ. ತಕ್ಷಣವೇ ಗಾಳಿ ಬೀಸಿ ಬಂದು ನನ್ನ ಟೋಪಿಯನ್ನು ಹಾರಿಸಿಕೊಂಡು ಹೋಗುತ್ತದೆ. ಅದನ್ನು ಹಿಡಿದು ತರಲು ನಾನು ದನಗಳನ್ನೆಲ್ಲಾ ಬಿಟ್ಟು ಓಡಬೇಕಾಗುತ್ತದೆ" ಎಂದು ದೂರು ಹೇಳಿದ. ರಾಜ ಅವನಿಗೆ ಸಮಾಧಾನ ಹೇಳಿ ಎಂದಿನಂತೆಯೇ ಮಾರನೆಯ ದಿನವೂ ಅವನು ದನಗಳನ್ನು ಹೊಡೆದುಕೊಂಡು ಹೋಗಬೇಕೆಂದು ಅಪ್ಪಣೆ ಮಾಡಿ ಕಳುಹಿಸಿದ.

ಮಾರನೆಯ ದಿನ ಕರಿಯನೂ ರಾಜಕುಮಾರಿಯೂ ದನಗಳೊಡನೆ ಬರುವ ಹೊತ್ತಿಗೆ ರಾಜ ಕೋಟೆಯ ಬಾಗಿಲಿಗೆ ಹೋಗಿ ಅವರಿಗೆ ಕಾಣದಂತೆ ಒಂದು ಕಡೆ ಮರೆಯಾಗಿ ನಿಂತಿದ್ದ. ರಾಜಕುಮಾರಿ ಬಂದು ಮಹಾಲಕ್ಷ್ಮಿಯನ್ನು ಮಾತಾಡಿಸಿದಳು. ಅದಕ್ಕೆ ಮಹಾಲಕ್ಷ್ಮಿ ಮೊದಲಿನ ಹಾಗೆಯೇ ಉತ್ತರ ಕೊಟ್ಟಿತು. ರಾಜ ಎಲ್ಲವನ್ನೂ ತಾನೇ ಕೇಳಿ ತಿಳಿದುಕೊಂಡ. ಅನಂತರ ಅವನು ಹುಲ್ಲುಗಾವಲಿಗೆ ಓಡಿ ಹೋಗಿ ಒಂದು ಬಂಡೆಯ ಹಿಂದೆ ಅವಿತುಕೊಂಡು ಕುಳಿತ. ರಾಜಕುಮಾರಿಯೂ ಕರಿಯನೂ ನಿಧಾನವಾಗಿ ದನಗಳನ್ನು ಅಟ್ಟಿಕೊಂಡು ಅಲ್ಲಿಗೆ ಬಂದರು. ಅವಳು ಎಂದಿನಂತೆಯೇ ತನ್ನ ತಲೆಯ ಕೂದಲನ್ನು ಬಿಚ್ಚಿದಳು. ಅದು ಬಿಸಿಲಿನಲ್ಲಿ ಬೆಳ್ಳಿಯಂತೆ ಥಳಥಳಿಸಿತು. ಆಗ ಅವಳು "ಗಾಳಿಯೇ, ಬೀಸಿ ಬಾ, ಬೇಗ ಬಾ; ಕರಿಯನ ಟೋಪಿ ಹಾರಿಹೋಗಲಿ. ನಾನು ನನ್ನ ಕೂದಲನ್ನೆಲ್ಲಾ ಬಾಚಿ ಜಡೆ ಹೆಣೆದುಕೊಳ್ಳುವವರೆಗೂ ಅವನ ಟೋಪಿ ಸಿಕ್ಕದಿರಲಿ" ಎಂದಳು. ಕೂಡಲೆ ಗಾಳಿ ಜೋರಾಗಿ ಬೀಸಿ ಬಂದು ಅವನ ಟೋಪಿಯನ್ನು ಹಾರಿಸಿಕೊಂಡು ಹೋಯಿತು. ಕರಿಯ ಅದರ ಹಿಂದೆಯೇ ಓಡಿದ. ರಾಜಕುಮಾರಿ ನಿರಾತಂಕವಾಗಿ ಕೂದಲನ್ನು ಬಾಚಿ ಜಡೆ ಹಾಕಿಕೊಂಡಳು. ಇದನ್ನೆಲ್ಲಾ ರಾಜ ಕಣ್ಣಾರ ನೋಡಿದ. ಆಮೇಲೆ ಅವನು ಅವಳಿಗೆ ಕಾಣಿಸಿಕೊಳ್ಳದೆ ಅರಮನೆಗೆ ಹಿಂದಿರುಗಿದ.

ಸಾಯಂಕಾಲ ರಾಜಕುಮಾರಿ ಮನೆಗೆ ಬಂದಾಗ ರಾಜ ಅವಳನ್ನು ಕರೆದು ಆ ದಿನ ತಾನು ನೋಡಿದ್ದನ್ನೆಲ್ಲಾ ಅವಳಿಗೆ ತಿಳಿಸಿ, "ಹೀಗೇಕೆ ಮಾಡುವೆ?" ಎಂದು ಕೇಳಿದ. ಅವಳು ಕಣ್ಣೀರು ಸುರಿಸುತ್ತಾ "ನಾನು ಅದನ್ನು ಯಾರಿಗೂ ಹೇಳಕೂಡದು, ಹೇಳಿದರೆ ನನ್ನ ಪ್ರಾಣ ಉಳಿಯುವುದಿಲ್ಲ" ಎಂದಳು. ಆದರೆ ರಾಜ ಹೇಳಲೇಬೇಕೆಂದು ಅವಳನ್ನು ಬಹಳವಾಗಿ ಒತ್ತಾಯಪಡಿಸಿದ. ಕಡೆಗೆ ಅವಳು ತನ್ನ ಕಥೆಯನ್ನೆಲ್ಲಾ ಸ್ವಲ್ಪವೂ ಮರೆಮಾಚದೆ ಅವನಿಗೆ ತಿಳಿಸಿದಳು. ಕೂಡಲೆ ರಾಜ ಅವಳಿಗೆ ರಾಜಕುಮಾರಿಗೆ ತಕ್ಕ ಬಟ್ಟೆಗಳನ್ನು ಉಡಿಸಿದ. ಆಗ ಅವಳು ಮೊದಲಿಗಿಂತಲೂ ಹೆಚ್ಚು ಚೆಲುವೆಯಾಗಿ ಕಂಡಳು. ಆಶ್ಚರ್ಯದಿಂದ ರಾಜ ಅವಳನ್ನೇ ನೋಡುತ್ತಿದ್ದು, ತನ್ನ ಮಗನನ್ನು ಕರೆದು "ಇಗೋ ನಿಜವಾದ ರಾಜಕುಮಾರಿ ಇಲ್ಲಿದ್ದಾಳೆ. ನೀನು ಮದುವೆಯಾಗಿರುವುದು ಇವಳ ಸೇವಕಿಯನ್ನು" ಎಂದು ಹೇಳಿದ. ತನ್ನ ಹೆಂಡತಿಯಾಗಬೇಕಾಗಿದ್ದ ಇವಳ ಚೆಲುವನ್ನು ನೋಡಿ ರಾಜಕುಮಾರನಿಗೆ ಬಹು ಸಂತೋಷವಾಯಿತು. ಅವನು ಆಗಲೇ ಅರಮನೆಯಲ್ಲೆಲ್ಲಾ ಹಬ್ಬದೂಟ ನಡೆಯಬೇಕೆಂದು ಅಪ್ಪಣೆ ಮಾಡಿದ.

ಊಟವಾದ ಮೇಲೆ ಎಲ್ಲರೂ ಒಂದು ಕಡೆ ಕಲೆತರು. ರಾಜಕುಮಾರ ಎತ್ತರವಾದ ಒಂದು ಆಸನದ ಮೇಲೆ ಕುಳಿತ. ಅವನ ಒಂದು ಪಕ್ಕದಲ್ಲಿ ನಿಜವಾದ ರಾಜಕುಮಾರಿಯೂ ಇನ್ನೊಂದು ಪಕ್ಕದಲ್ಲಿ ರಾಣಿಯಂತೆ ನಟಿಸುತ್ತಿದ್ದ ಮೋಸಗಾರಳಾದ ಅವಳ ಸೇವಕಿಯೂ ಕುಳಿತಿದ್ದರು. ದೊಡ್ಡ ರಾಜ ಈ ಸೇವಕಿಯನ್ನು ನೋಡಿ, ರಾಜಕುಮಾರಿಯಿಂದ ತಾನು ತಿಳಿದುಕೊಂಡಿದ್ದ ಸಂಗತಿಯನ್ನೆಲ್ಲಾ ಎಂದೋ ಕೇಳಿದ್ದ ಕಥೆಯಂತೆ ಅವಳಿಗೆ ಹೇಳಿ, "ಈ ರೀತಿ ನಡೆಯುವವರಿಗೆ ಏನು ಮಾಡಬೇಕು, ಹೇಳು" ಎಂದ. ಅವಳು ಈ ಕಥೆ ತನಗೇ ಸಂಬಂಧಪಟ್ಟುದೆಂದು ಸ್ವಲ್ಪವಾದರೂ ಅನುಮಾನ ಪಡದೆ, "ಇಂಥ ನೀಚಳನ್ನು ಒಳಗೆಲ್ಲಾ ಚೂಪಾದ ಮೊಳೆಗಳನ್ನು ಹೊಡೆದಿರುವ ಪೀಪಾಯಿಯೊಳಗೆ ಹಾಕಿ, ಆ ಪೀಪಾಯಿಗೆ ಎರಡು ಕುದುರೆಗಳನ್ನು ಕಟ್ಟಿ, ಅವಳು ಸಾಯುವವರೆಗೂ ಅದನ್ನು ಊರಿನ ಬೀದಿಬೀದಿಗಳಲ್ಲಿಯೂ ಎಳೆಸಬೇಕು" ಎಂದು ಸಲಹೆಕೊಟ್ಟಳು. ರಾಜ

"ನೀನೇ ಆ ನೀಚಳು! ನಿನಗೆ ಎಂಥ ಶಿಕ್ಷೆ ಕೊಡಬೇಕೆಂದು ನೀನೇ ಹೇಳಿರುವೆ. ನಿನ್ನ ಇಷ್ಟದಂತೆಯೇ ಮಾಡುತ್ತೇನೆ!" ಎಂದ. ಅನಂತರ ರಾಜಕುಮಾರನಿಗೂ ನಿಜವಾದ ರಾಜಕುಮಾರಿಗೂ ವೈಭವದಿಂದ ಮದುವೆ ನಡೆಯಿತು. ಅವರಿಬ್ಬರೂ ಬಹಳ ವರ್ಷಗಳು ಸುಖವಾಗಿ ಬದುಕಿ ರಾಜ್ಯಭಾರ ಮಾಡಿದರು.

# ಮಂಜಿನ ತಾಯಿ

ಒಬ್ಬ ವಿಧವೆಗೆ ಇಬ್ಬರು ಹೆಣ್ಣು ಮಕ್ಕಳಿದ್ದರು. ಅವರಲ್ಲಿ ಒಬ್ಬಳು ಕುರೂಪಿ, ಸೋಮಾರಿ. ಇನ್ನೊಬ್ಬಳು ಬಹಳ ಚೆಲುವೆ, ಕಷ್ಟಪಟ್ಟು ಕೆಲಸ ಮಾಡುವವಳು.

ಆ ವಿಧವೆಗೆ ಕುರೂಪಿಯೂ ಸೋಮಾರಿಯೂ ಆಗಿದ್ದ ಮಗಳನ್ನು ಕಂಡರೆ ಹೆಚ್ಚಿನ ಪ್ರೀತಿಯಿತ್ತು. ಆದ್ದರಿಂದ ಎರಡನೆಯ ಮಗಳು ಮನೆಯ ಕೆಲಸವನ್ನೆಲ್ಲಾ ಒಬ್ಬಳೇ ಮಾಡಬೇಕಾಗಿತ್ತು. ಪ್ರತಿದಿನವೂ ಇವಳು ತಮ್ಮ ಮನೆಯ ಮುಂದಿನ ರಸ್ತೆಯ ಪಕ್ಕದಲ್ಲಿದ್ದ ಇಳಿಯುವ ಬಾವಿಯ ಮೆಟ್ಟಲಿನ ಮೇಲೆ ಕುಳಿತು ತಕಲಿಯನ್ನು ಹಿಡಿದು ನೂಲು ತೆಗೆಯುತ್ತಿದ್ದಳು. ನೂತು ನೂತು ಅವಳಿಗೆ ಸಾಕಾಗಿ ಹೋಗುತ್ತಿತ್ತು. ಅನೇಕ ಸಾರಿ ಅವಳ ಬೆರಳುಗಳೆಲ್ಲಾ ಗಾಯವಾಗಿ ರಕ್ತ ಸೋರುತ್ತಿತ್ತು. ಹೀಗೆಯೇ ಇರಲು ಒಂದು ದಿನ ಅವಳ ಬೆರಳಿನಿಂದ ರಕ್ತ ಹರಿದು ತಕಲಿಯೆಲ್ಲಾ ರಕ್ತ ಮಯವಾಯಿತು. ಅದನ್ನು ತೊಳೆಯಬೇಕೆಂದು ಅವಳು ಮೆಟ್ಟಲುಗಳನ್ನು ಇಳಿದುಹೋಗಿ ತಕಲಿಯನ್ನು ನೀರಿನಲ್ಲಿ ಅದ್ದಿದಳು. ಪಾಪ! ಅವಳ ದುರದೃಷ್ಟ! ಅದು ಕೈಯಿಂದ ಜಾರಿ ನೀರಿನೊಳಕ್ಕೆ ಬಿದ್ದುಹೋಯಿತು. ಅವಳು ಅಳುತ್ತಾ ತಾಯಿಯ ಹತ್ತಿರಕ್ಕೆ ಓಡಿಹೋಗಿ ನಡೆದುದನ್ನೆಲ್ಲಾ ತಿಳಿಸಿದಳು. ಆದರೆ ಆಕೆ ಅವಳನ್ನು ಚೆನ್ನಾಗಿ ಬೈದು "ತಕಲಿಯನ್ನು ನೀರಿಗೆ ಹಾಕು ಎಂತ ನಿನಗೆ ಹೇಳಿದವರು ಯಾರು? ಅದನ್ನು ಮೇಲಕ್ಕೆ ತರದೆ ಬಂದರೆ ತಲೆ ಒಡೆದುಬಿಡುತ್ತೇನೆ! ಹೋಗು!" ಎಂದು ಗದರಿಸಿ ಕಳುಹಿಸಿದಳು. ಹುಡುಗಿಗೆ ದಿಕ್ಕುತೋಚದಹಾಗಾಯಿತು. ಅವಳು ಮತ್ತೆ ಬಾವಿಗೆ ಬಂದಳು. ಅವಳ ದುಃಖ ಮಿತಿಮೀರಿತು. ಆದ್ದರಿಂದ ಏನು ಮಾಡಬೇಕೆಂಬುದನ್ನು ಅರಿಯದೆ ನೀರಿಗೆ ಹಾರಿದಳು. ಹಾರಿದ

ಕೂಡಲೆ ಅವಳಿಗೆ ಜ್ಞಾನ ತಪ್ಪಿತು. ಅವಳು ಹಾಗೆಯೇ ತಳಕ್ಕೆ ಹೋದಳು. ಸ್ವಲ್ಪಹೊತ್ತಿನಲ್ಲೇ ಅವಳಿಗೆ ಎಚ್ಚರವಾಯಿತು, ಪ್ರಜ್ಞೆಬಂತು. ಕಣ್ಣು ಬಿಟ್ಟು ನೋಡಿದಳು. ಸುತ್ತಲೂ ಸೊಗಸಾದ ಹುಲ್ಲುಗಾವಲಿತ್ತು. ಸೂರ್ಯ ಪ್ರಕಾಶಿಸುತ್ತಿದ್ದ. ಬಿಸಿಲು ಬೇಕಾದಷ್ಟು ಬಿದ್ದಿತ್ತು. ಮರಗಳ ರೆಂಬೆಗಳ ಮೇಲೆ ಹಕ್ಕಿಗಳು ಇಂಪಾಗಿ ಹಾಡುತ್ತಿದ್ದವು. ಸಾವಿರಾರು ಹೂಗಳು ಅವಳ ಕಾಲಕೆಳಗೆ ಅರಳಿ ನಗುತ್ತಿದ್ದವು.

ಅವಳು ಮೇಲಕ್ಕೆದ್ದು ಸಂತೋಷಕರವಾದ ಆ ಹುಲ್ಲುಗಾವಲಿನಲ್ಲಿ ನಡೆದುಹೋದಳು. ಸ್ವಲ್ಪ ದೂರದಲ್ಲೇ ಒಂದು ಅಡವಿಯಿತ್ತು. ಅದರ ಬದಿಯಲ್ಲಿ ಒಂದು ಸೊಗಸಾದ ಗುಡಿಸಲಿತ್ತು. ಅವಳು ಅದರ ಒಳಗೆ ಹೋಗಿ ನೋಡಲು ಒಲೆಯ ಮೇಲೆ ಹೊಸದಾದ ಒಂದು ರೊಟ್ಟಿ ಸುಡುತ್ತಿತ್ತು. ಅವಳನ್ನು ನೋಡಿದ ಕೂಡಲೆ ಆ ರೊಟ್ಟಿ "ನನ್ನನ್ನು ಹೊರಕ್ಕೆ ತೆಗೆ. ನನಗೆ ಸುಟ್ಟುಸುಟ್ಟು ಸಾಕಾಯಿತು, ಬೆಂದುಹೋಗಿದ್ದೇನೆ, ಹೊರಕ್ಕೆ ತೆಗೆ" ಎಂದು ಕೇಳಿಕೊಂಡಿತು. ಆದ್ದರಿಂದ ಅವಳು ಒಂದೆರಡು ಹೆಜ್ಜೆ ಮುಂದೆ ಕಾಲಿಟ್ಟು ರೊಟ್ಟಿಯನ್ನು ಬೆಂಕಿಯಿಂದ ಈಚೆಗೆ ಎಳೆದು ಹಾಕಿದಳು. ಅವಳು ಅಲ್ಲಿಂದ ಮುಂದಕ್ಕೆ ನಡೆದು ಹೋಗಲು ಕೆಂಪನೆಯ ಹಣ್ಣುಗಳು ತುಂಬಿದ್ದ ಒಂದು ಸೇಬಿನಮರ ಸಿಕ್ಕಿತು. ಅದು ನನ್ನನ್ನು ಅಲ್ಲಾಡಿಸು, ನನ್ನನ್ನು ಅಲ್ಲಾಡಿಸು, ಹಣ್ಣುಗಳೆಲ್ಲಾ ಮಾಗಿಹೋಗಿವೆ. ಇನ್ನು ಇಷ್ಟೊಂದು ಭಾರ ಹೊತ್ತಿರಲು ನನ್ನಿಂದ ಸಾಧ್ಯವಿಲ್ಲ" ಎಂದಿತು. ಅವಳು ಮರವನ್ನು ಹಿಡಿದು ಅಲ್ಲಾಡಿಸಿದಳು. ಹಣ್ಣುಗಳೆಲ್ಲಾ ಮಳೆಯ ಹನಿಗಳಂತೆ ಕೆಳಕ್ಕೆ ಉದುರಿದವು. ಮರದ ಮೇಲೆ ಒಂದು ಹಣ್ಣೂ ಉಳಿಯಲಿಲ್ಲ. ಅವಳು ಮತ್ತೆ ಅಲ್ಲಿಂದ ಮುಂದೆ ಹೋದಳು. ಕಡೆಗೊಂದು ಸಣ್ಣ ಗುಡಿಸಲು ಕಂಡುಬಂತು. ಅದರ ಮುಂದೆ ಒಬ್ಬ ಮುದುಕಿ ಕುಳಿತಿದ್ದಳು. ಅವಳನ್ನು ನೋಡಿದ ಕೂಡಲೆ ಹುಡುಗಿ ಓಡಿಹೋಗಲು ಪ್ರಯತ್ನಿಸಿದಳು. ಆದರೆ ಮುದುಕಿ ಅವಳನ್ನು ಕೂಗಿ "ಮಗು, ಹೆದರಬೇಡ. ನನ್ನ ಹತ್ತಿರವೇ ಬಂದುಇರು. ನೀನು ನನ್ನ ಸೇವಕಳಾಗಿರಬೇಕೆಂದು ನನ್ನ ಆಸೆ. ಮನೆಯ ಕೆಲಸವನ್ನೆಲ್ಲಾ ಚೆನ್ನಾಗಿ ಮಾಡಿದರೆ ನಿನಗೆ ಒಳ್ಳೆಯದಾಗುವುದು. ನನ್ನ ಹಾಸಿಗೆಯನ್ನು ಮಾತ್ರ ಮೆತ್ತಗಿರುವಂತೆ ಎಚ್ಚರಿಕೆ

ಯಿಂದ ಹಾಸಬೇಕು. ಪ್ರತಿದಿವಸವೂ ಬೆಳಗಾದ ಕೂಡಲೆ ಅದನ್ನು ಬಾಗಿಲು ಹೊರಗೆ ತಂದು ಅದರೊಳಗಿನ ಧೂಳಿನ ಕಣಗಳೆಲ್ಲಾ ಹಾರಿ ಹೋಗುವಂತೆ ಚೆನ್ನಾಗಿ ಕೊಡವಬೇಕು. ಏಕೆಂದರೆ ಹಾಗೆ ಕಣಗಳು ಹಾರಿದರೆ ಭೂಲೋಕದ ಜನ 'ಮಂಜುಬೀಳುತ್ತದೆ, ಮಂಜುಬೀಳುತ್ತದೆ' ಎನ್ನುತ್ತಾರೆ. ನಾನೇ ಮಂಜಿನ ತಾಯಿ" ಎಂದಳು.

ಮುದುಕಿ ಇಷ್ಟೊಂದು ಕರುಣೆಯಿಂದಲೂ ವಿಶ್ವಾಸದಿಂದಲೂ ಮಾತಾಡಿದುದರಿಂದ ಹುಡುಗಿಗೆ ಅಲ್ಲೇ ಇದ್ದುಬಿಡಬೇಕು ಎನ್ನಿಸಿತು. ಅವಳು ಅಂದಿನಿಂದಲೇ ಮನೆಗೆಲಸಗಳನ್ನೆಲ್ಲಾ ಮಾಡಲು ಆರಂಭಿಸಿದಳು. ಎಲ್ಲಾ ವಿಷಯಗಳಲ್ಲೂ ಮುದುಕಿಯ ಮನಸ್ಸಿಗೆ ಮೆಚ್ಚುಗೆಯಾಗು ವಂತೆ ಕೆಲಸ ಮಾಡುತ್ತಿದ್ದಳು. ಹಾಸಿಗೆಯನ್ನು ಚೆನ್ನಾಗಿ ಕೊಡವಿ ಹಾಕುತ್ತಿದ್ದಳು. ಆದಕಾರಣ ಅವಳಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ. ಪ್ರತಿದಿನವೂ ತಿನ್ನಲು ಬೇಕುಬೇಕಾದ ರುಚಿಕರವಾದ ಪದಾರ್ಥಗಳೆಲ್ಲಾ ಸಿಕ್ಕುತ್ತಿದ್ದವು.

ಆದರೆ ಮುದುಕಿಯ ಜೊತೆಯಲ್ಲಿ ಸ್ವಲ್ಪಕಾಲ ಇದ್ದನಂತರ ಅವಳಿಗೆ ಒಂದು ರೀತಿಯ ವ್ಯಥೆ ಬಂತು. ತನ್ನ ತಾಯಿಯ ಮನೆಗಿಂತಲೂ ಇಲ್ಲಿ ಅವಳು ಹೆಚ್ಚು ಸುಖವಾಗಿದ್ದುದೇನೋ ನಿಜ. ಆದರೂ ಅವಳಿಗೆ ಮತ್ತೆ ತೌರುಮನೆಗೆ ಹಿಂದಿರುಗಬೇಕೆಂಬ ಅಪೇಕ್ಷೆ ಬಹಳವಾಯಿತು. ಒಂದು ದಿನ ಅವಳು ಯಜಮಾನಿಯ ಬಳಿಗೆ ಹೋಗಿ "ನಮ್ಮ ಮನೆಯಲ್ಲಿದ್ದಾಗ ನನಗೆ ಒದಗಿದ ಕಷ್ಟಗಳನ್ನು ತಾಳಲಾರದೆ ಹೋಗುತ್ತಿದ್ದೆ. ಆದರೆ, ಆ ಕಷ್ಟಗಳೆಲ್ಲಾ ಮತ್ತೆ ಬಂದರೂ ಚಿಂತೆಯಿಲ್ಲ. ಇನ್ನು ಇಲ್ಲಿರಲು ನನ್ನಿಂದ ಆಗುವುದಿಲ್ಲ" ಎಂದು ಹಲುಬಿದಳು. ಯಜಮಾನಿ "ನೀನು ಹೇಳುವುದು ಸರಿ. ನಿನ್ನ ಇಷ್ಟದ ಪ್ರಕಾರವೇ ಮಾಡು. ನೀನು ಬಹಳ ಒಳ್ಳೆಯ ಹುಡುಗಿಯಾಗಿದ್ದೆ. ಆದ್ದರಿಂದ ನಾನೇ ಬಂದು ನಿನಗೆ ಹಿಂತಿರುಗಲು ದಾರಿ ತೋರಿಸುತ್ತೇನೆ" ಎಂದು ಹೇಳಿ ಹುಡುಗಿಯ ಕೈಹಿಡಿದು, ಗುಡಿಸಲಿನ ಹಿಂಭಾಗಕ್ಕೆ ಕರೆದುಕೊಂಡು ಹೋಗಿ ಒಂದು ಬಾಗಿಲನ್ನು ತೆರೆದಳು. ಹುಡುಗಿ ಬಾಗಿಲ ಕೆಳಗೆ ನಿಂತಿದ್ದಾಗ ಅವಳ ಮೇಲೆ ಬಂಗಾರದ ಮಳೆ ಬೀಳಲು ಆರಂಭವಾಯಿತು. ಅವಳು ಬೇಗನೆ ತನ್ನ ಸೆರಗನ್ನು ಅಗಲವಾಗಿ

ತೆಗೆದು ಹಿಡಿದು ಅದರಲ್ಲಿ ಎಷ್ಟೋ ಬಂಗಾರವನ್ನು ಕೂಡಿಹಾಕಿದಳು. ಮುದುಕಿ ಅವಳಿಗೆ ಹೊಳೆಯುವ ಚಿನ್ನದ ಉಡುಗೆಯನ್ನು ಕೊಟ್ಟು "ಇದೆಲ್ಲಾ ನೀನು ಒಳ್ಳೆಯವಳಾಗಿದ್ದುದಕ್ಕೆ" ಎಂದು ಹೇಳಿದಳು. ಬಾವಿಯಲ್ಲಿ ಬಿದ್ದಿದ್ದ ಅವಳ ತಕಲಿಯನ್ನೂ ಹಿಂತಿರುಗಿ ಕೊಟ್ಟಳು. ಅನಂತರ ಅವಳು ಹುಡುಗಿಯನ್ನು ಇನ್ನೊಂದು ಬಾಗಿಲಿನಿಂದ ಹೊರಕ್ಕೆ ಕಳುಹಿಸಿ ಕೊಟ್ಟಳು. ಹುಡುಗಿ ಹೊರಕ್ಕೆ ಬಂದುದೇ ತಡ, ಬಾಗಿಲು ಮುಚ್ಚಿಕೊಂಡಿತು. ಅವಳು ಆಗಲೇ ತನ್ನ ತಾಯಿಯ ಮನೆಗೆ ಸ್ವಲ್ಪ ದೂರದಲ್ಲಿದ್ದಳು. ಮನೆಯ ಅಂಗಳಕ್ಕೆ ಅವಳು ಕಾಲಿಟ್ಟಕೂಡಲೆ ಬಾವಿಯ ಕಟ್ಟೆಯ ಮೇಲೆ ಕೂತಿದ್ದ ಕೋಳಿ ರೆಕ್ಕೆಗಳನ್ನು ಬಡಿದು "ಕ್ಕೊ ಕ್ಕೋ ಕ್ಕೋ", ನಮ್ಮ ಬಂಗಾರದ ಹುಡುಗಿ ಬಂದಳು!" ಎಂದು ಕೂಗಿತು.

ಅನಂತರ ಅವಳು ಮನೆಯ ಒಳಕ್ಕೆ ಹೋದಳು. ಈಗ ಅವಳು ಬಹಳ ಐಶ್ವರ್ಯವಂತಳಾಗಿದ್ದುದರಿಂದ ಅವಳ ತಾಯಿ ಅವಳನ್ನು ಬಹಳ ಆದರದಿಂದ ಬರಮಾಡಿಕೊಂಡಳು. ಇಷ್ಟೊಂದು ಹೊನ್ನು ಹೇಗೆ ಬಂದಿತೆಂದು ಅವಳನ್ನು ಕೇಳಿ ತಿಳಿದುಕೊಂಡಳು. ಕುರೂಪಿಯೂ ಸೋಮಾರಿಯೂ ಆಗಿದ್ದ ತನ್ನ ಎರಡನೆಯ ಮಗಳೂ ಇದೇ ರೀತಿ ಸಂಪಾದಿಸಬೇಕೆಂದು ಅವಳಿಗೆ ದುರಾಸೆ ಹುಟ್ಟಿತು. ಆದ್ದರಿಂದ ಆ ಹುಡುಗಿಯೂ ಬಾವಿಯ ಹತ್ತಿರ ಕುಳಿತು ನೂಲು ತೆಗೆಯಬೇಕೆಂದು ಅಪ್ಪಣೆ ಮಾಡಿದಳು.

ಎರಡನೆಯ ಹುಡುಗಿ ಬಾವಿಯ ಮೆಟ್ಟಿಲ ಮೇಲೆ ಹೋಗಿ ಕುಳಿತಳು. ತನ್ನ ತಕಲಿ ರಕ್ತಮಯವಾಗಲೆಂದು ಬೇಕುಬೇಕೆಂತಲೇ ಅದರ ಕೊನೆಯಿಂದ ಬೆರಳುಗಳನ್ನು ಚುಚ್ಚಿಕೊಂಡಳು. ಅದರಿಂದ ಹೆಚ್ಚು ರಕ್ತ ಬರದಿರಲು ಅವಳು ತನ್ನ ಕೈಯನ್ನು ಒಂದು ಮುಳ್ಳು ಪೊದೆಯೊಳಕ್ಕೆ ತೂರಿಸಿ ಗಾಯಪಡಿಸಿಕೊಂಡಳು. ಅನಂತರ ತಕಲಿಯನ್ನು ತಾನೇ ನೀರಿನೊಳಕ್ಕೆ ಎಸೆದು ಅದರ ಹಿಂದೆ ತಾನೂ ಧುಮುಕಿದಳು.

ತನ್ನ ಸೋದರಿಯಂತೆ ಅವಳೂ ಒಂದು ಸುಂದರವಾದ ಹುಲ್ಲುಗಾವಲಿಗೆ ಬಂದು ಅದೇ ದಾರಿಯಲ್ಲೇ ನಡೆದುಹೋದಳು. ಅವಳು ಗುಡಿಸಲಿನಲ್ಲಿದ್ದ ಒಲೆಯ ಹತ್ತಿರ ಬಂದಾಗ ರೊಟ್ಟಿ ಮೊದಲಿನಂತೆಯೇ "ನನ್ನನ್ನು

ಹೊರಕ್ಕೆ ತೆಗೆ. ನನಗೆ ಸುಟ್ಟು ಸುಟ್ಟು ಸಾಕಾಯಿತು; ಬೆಂದುಹೋಗು ತ್ತಿದ್ದೇನೆ, ಹೊರಕ್ಕೆ ತೆಗೆ" ಎಂದು ಬೇಡಿತು. ಆದರೆ ಆ ಸೋಮಾರಿ ಹುಡುಗಿ "ಒಳ್ಳೆಯ ಮಾತು! ನಿನಗೋಸ್ಕರ ನನ್ನ ಕೈಯನ್ನೆಲ್ಲಾ ಕೊಳೆ ಮಾಡಿಕೊಳ್ಳಬೇಕು ಎನ್ನುವಿಯಾ?" ಎಂದು ಹೇಳಿ ಹೊರಟುಹೋದಳು. ಸ್ವಲ್ಪ ಹೊತ್ತಿನಲ್ಲೇ ಅವಳು ಸೇಬಿನ ಮರದ ಬಳಿಗೆ ಬಂದಳು. ಮರ "ನನ್ನನ್ನು ಅಲ್ಲಾಡಿಸು, ನನ್ನನ್ನು ಅಲ್ಲಾಡಿಸು. ನನ್ನ ಹಣ್ಣುಗಳೆಲ್ಲಾ ಮಾಗಿ ಹೋಗಿವೆ; ಇನ್ನು ಇಷ್ಟೊಂದು ಭಾರವನ್ನು ಹೊರುವುದು ನನ್ನಿಂದ ಸಾಧ್ಯವಿಲ್ಲ" ಎಂದಿತು. ಅವಳು "ಬಹಳ ಬುದ್ಧಿವಂತ! ನಿನಗೊಬ್ಬನಿಗೇ ಅಲ್ಲ ಜಾಣತನ ಇರುವುದು! ನಿನ್ನನ್ನು ಅಲ್ಲಾಡಿಸಿ ನನ್ನ ತಲೆ ಒಡೆದು ಕೊಳ್ಳಬೇಕು ಎನ್ನುವೆಯಾ?" ಎಂದು ಹೇಳಿ ಹೊರಟೇಹೋದಳು.

ಕಡೆಗೆ ಅವಳು ಮಂಜಿನ ತಾಯಿಯ ಮನೆಗೆ ಬಂದು ಆಕೆಯ ಸೇವಕಿಯಾಗಿರಲು ಒಪ್ಪಿಕೊಂಡಳು. ಮೊದಲನೆಯ ದಿನ ಅವಳು ಸರಿಯಾಗಿ ನಡೆದುಕೊಂಡು ಯಜಮಾನಿ ಹೇಳಿದ ಕೆಲಸವನ್ನೆಲ್ಲಾ ಮಾಡಿ ದಳು. ಏಕೆಂದರೆ ಬಂಗಾರ ಸಂಪಾದಿಸಬೇಕೆಂಬ ಆಸೆ ಅವಳ ತಲೆಯ ತುಂಬಾ ಇತ್ತು. ಆದರೆ ಎರಡನೆಯ ದಿನವೇ ಅವಳ ಸೋಮಾರಿತನ ಮೊದಲಾಯಿತು. ಮೂರನೆಯ ದಿನ ಅದು ಇನ್ನೂ ಹೆಚ್ಚಿತು. ಅವಳು ಬೆಳಗ್ಗೆ ಬೇಗ ಏಳಲಿಲ್ಲ. ಎದ್ದಮೇಲಾದರೂ ಕೆಲಸ ಮಾಡಬೇಕಲ್ಲ— ಅದೂ ಇಲ್ಲ. ಹಾಸಿಗೆಯನ್ನು ಅವಳು ಸರಿಯಾಗಿ ಕೊಡವಿ ಹಾಸಲಿಲ್ಲ. ಇವಳ ನಡತೆಯನ್ನು ಕಂಡು ಮಂಜಿನ ತಾಯಿಗೆ ಬೇಸರವಾಯಿತು. ಆದ್ದರಿಂದ ಆಕೆ "ಸಾಕಮ್ಮಾ, ಮಹರಾಯತಿ! ನೀನಿನ್ನು ನನ್ನ ಮನೆ ಬಿಟ್ಟು ಹೊರಡು!" ಎಂದಳು. ಇದರಿಂದ ಆ ಹುಡುಗಿಗೆ ನಾಚಿಕೆಯಾಗು ವುದರ ಬದಲು ಸಂತೋಷವೇ ಆಯಿತು. ಅವಳು "ಇನ್ನೇನು, ಈಗ ಬಂಗಾರದ ಮಳೆ ಪ್ರಾರಂಭವಾಗುತ್ತದೆ" ಎಂದುಕೊಂಡು ಕುತೂಹಲದಿಂದ ಕಣ್ಣರಳಿಸಿ ಸುತ್ತಲೂ ನೋಡತೊಡಗಿದಳು. ಅನಂತರ ಮುದುಕಿ ಅವಳನ್ನು ಹಿಂದೆ ಮೊದಲನೆಯವಳನ್ನು ಕರೆದುಕೊಂಡು ಹೋಗಿದ್ದ ಬಾಗಿಲಿಗೇ ಕರೆದೊಯ್ದಳು. ಆದರೆ ಹುಡುಗಿ ಅದರ ಹೊಸಲ ಮೇಲೆ ನಿಂತಾಗ ಬಂಗಾರದ ಮಳೆಯ ಬದಲು ಒಂದು ದೊಡ್ಡ ಕೊಡದಷ್ಟು ಕೆಸರು ಅವಳ

ಮೇಲೆ ಹನಿಹನಿಯಾಗಿ ಉದುರಿತು. ಮುದುಕಿ "ಇದೇ ನೀನು ಮಾಡಿದ ಕೆಲಸಕ್ಕೆ ಪ್ರತಿಫಲ" ಎನ್ನುತ್ತಾ ಅವಳನ್ನು ಹೊರಕ್ಕೆ ತಳ್ಳಿ ಬಾಗಿಲು ಮುಚ್ಚಿದಳು. ಮನೆಗೆ ಹೋಗುವ ಹೊತ್ತಿಗೆ ಅವಳ ಬಟ್ಟೆಗಳೆಲ್ಲಾ ಕೆಸರಿನಿಂದ ಕಠ್ರಗಾಗಿದ್ದವು. ಅವಳು ತನ್ನ ತಾಯಿಯ ಮನೆಯ ಸಮೀಪಕ್ಕೆ ಬಂದಾಗ, ಬಾವಿಯಕಟ್ಟೆಯ ಮೇಲೆ ಕುಳಿತಿದ್ದ ಕೋಳಿ ರೆಕ್ಕೆಗಳನ್ನು ಬಡಿಯುತ್ತಾ "ಕ್ಕೊ ಕ್ಕೊಕ್ಕೊ ಕ್ಕೊಕ್ಕೊ, ನಮ್ಮ ಕೊಳಕು ಹುಡುಗಿ ಬಂದಳು" ಎಂದು ಕೂಗಿತು.

# ಹುಲ್ಲಿನಕಡ್ಡಿ, ಬೆಂಕಿಯಕೆಂಡ, ಅವರೆಯಕಾಳು

ಒಂದು ಊರಿನಲ್ಲಿ ಒಬ್ಬ ಮುದುಕಿಯಿದ್ದಳು. ಅವಳು ಬಹಳ ಬಡವಳು. ಒಂದು ದಿನ ಅವಳು ಎಲ್ಲೆಲ್ಲೋ ಅಲೆದು ಸ್ವಲ್ಪ ಅವರೆಯ ಕಾಳು ಸಂಪಾದಿಸಿ ಅವನ್ನು ಬೇಯಿಸಿ ತಿನ್ನಬೇಕೆಂದು ಮನಸ್ಸುಮಾಡಿದಳು. ಒಲೆ ಹೊತ್ತಿಸುವುದಕ್ಕೆ ಅವಳ ಮನೆಯಲ್ಲಿ ಸೀಮೆಎಣ್ಣೆ ಇರಲಿಲ್ಲ. ಆದ್ದರಿಂದ ಅವಳು ಒಣಗಿದ ರಾಗಿಯ ಹುಲ್ಲಿಗೆ ಮೊದಲು ಬೆಂಕಿ ಹೊತ್ತಿಸಿ, ಅದರ ಮೇಲೆ ಸೌದೆಯ ಚೂರುಗಳನ್ನಿಟ್ಟು ಬೆಂಕಿ ತಯಾರು ಮಾಡಿದಳು. ಅವಳು ಹೀಗೆ ಮಾಡುವಾಗ ಒಂದು ಹುಲ್ಲಿನಕಡ್ಡಿ ಅವಳ ಕೈಯಿಂದ ತಪ್ಪಿಸಿಕೊಂಡು ಕೆಳಗೆ ಬಿತ್ತು. ಅನಂತರ ಅವಳು ಉರಿಯ ಮೇಲೆ ಒಂದು ಮಡಕೆಯನ್ನಿಟ್ಟು ಅದರಲ್ಲಿ ನೀರು ಕಾಯಿಸಿ, ಕಾಳುಗಳನ್ನು ಕುದಿಯುವ ನೀರಿಗೆ ಸುರಿದಳು ಅವಳು ಹೀಗೆ ಸುರಿಯುತ್ತಿದ್ದಾಗ ಒಂದು ಕಾಳು ತಪ್ಪಿಸಿಕೊಂಡು ಕೆಳಗೆ ಬಿದ್ದು ಅಲ್ಲೇ ಇದ್ದ ಹುಲ್ಲಿನ ಕಡ್ಡಿಯ ಪಕ್ಕಕ್ಕೆ ಸರಿಯಿತು. ಒಂದೆರಡು ನಿಮಿಷಗಳಲ್ಲೇ ಒಂದು ಬೆಂಕಿಯ ಕೆಂಡ ಒಲೆಯಿಂದ ಹೊರಕ್ಕೆ ಉರುಳಿ ಇವೆರಡೂ ಇದ್ದ ಕಡೆಗೆ ಬಂತು.

ಹುಲ್ಲಿನಕಡ್ಡಿ ಕಾಳನ್ನೂ ಕೆಂಡವನ್ನೂ ನೋಡಿ "ಗೆಳೆಯರೇ, ನೀವು ಎಲ್ಲಿಂದ ಬಂದಿರಿ?" ಎಂದು ಕೇಳಿತು.

ಕೆಂಡ "ದೇವರ ದಯೆಯಿಂದ ನಾನು ಬೆಂಕಿಯಿಂದ ತಪ್ಪಿಸಿಕೊಂಡು ಬಂದೆ. ಇಲ್ಲದಿದ್ದರೆ ಉರಿದು ಬೂದಿಯಾಗಿ ಹೋಗುತ್ತಿದ್ದೆ" ಎಂದಿತು.

ಅವರೆಯಕಾಳು "ದೇವರ ದಯೆಯಿಂದ ನಾನು ಮುದುಕಿಯ ಕೈಯಿಂದ ನುಣುಚಿಕೊಂಡು ಅವಳಿಗೆ ಕಾಣದಂತೆ ಕೆಳಕ್ಕೆ ಬಂದೆ. ಇಲ್ಲದಿದ್ದರೆ ಆ ನೀರಿನಲ್ಲಿ ನನ್ನ ಮೈಯೆಲ್ಲಾ ಬೆಂದು ಚರ್ಮ ಸುಲಿದು ಹೋಗುತ್ತಿತ್ತು. ನನ್ನ ಸಂಗಾತಿಗಳೆಲ್ಲಾ; ಪಾಪ, ಅಲ್ಲಿ ನರಳುತ್ತಿದ್ದಾರೆ. ಇಷ್ಟು

ಹೊತ್ತಿಗೆ ಅವರೆಲ್ಲರೂ ಪೂರ್ತಿಯಾಗಿ ಸತ್ತು ಹೋಗಿರಬೇಕು. ದೇವರು ಕಾಪಾಡಿದ, ನಾನು ಬದುಕಿಕೊಂಡೆ" ಎಂದಿತು.

ಹುಲ್ಲಿನ ಕಡ್ಡಿ "ನನ್ನ ಪಾಡೂ ನಿಮ್ಮದರ ಹಾಗೆಯೇ ಆಗಿತ್ತು. ನನ್ನ ಅಣ್ಣತಮ್ಮಂದಿರು ಅಕ್ಕತಂಗಿಯರು ಎಲ್ಲಾ ಬೆಂಕಿಯ ಪಾಲಾದರು. ಪಾಪಿ, ಆ ಮುದುಕಿ ನೂರಾರು ಜನರನ್ನು ಒಂದೇ ಸಾರಿ ಒಲೆಗೆ ತುರುಕಿ ಬಿಟ್ಟಳು! ನನ್ನ ಅದೃಷ್ಟ! ನಾನೊಬ್ಬನು ಅವಳ ಬೆರಳುಗಳ ಸಂದಿನಲ್ಲಿ ನುಸುಳಿ ತಪ್ಪಿಸಿಕೊಂಡೆ!" ಎಂದಿತು.

ಕೆಂಡ "ಈಗ ನಾವೇನು ಮಾಡೋಣ?" ಎಂದು ಕೇಳಿತು.

ಅವರೆಯ ಕಾಳು "ನಾವು ಒಂದೇ ಸಾರಿ ಸಾವಿನ ದವಡೆಯಿಂದ ತಪ್ಪಿಸಿಕೊಂಡು ಬಂದಿರುವುದರಿಂದ ಇನ್ನು ಮೇಲೆ ಮೂವರೂ ಸ್ನೇಹಿತ ರಾಗಿ ಒಟ್ಟಿಗೆ ಒಂದೇ ಕಡೆ ಇರೋಣ. ಇಲ್ಲಿದ್ದರೆ ಅಪಾಯ ತಪ್ಪಿದ್ದಲ್ಲ. ಆದ್ದರಿಂದ ಇನ್ನೆಲ್ಲಿಯಾದರೂ ದೂರದ ಸ್ಥಳಕ್ಕೆ ಹೋಗಿ ವಾಸಮಾಡೋಣ" ಎಂದಿತು.

ಈ ಸಲಹೆಯನ್ನು ಕೆಂಡವೂ ಕಾಳೂ ಒಪ್ಪಿದವು. ಅದರಂತೆ ಎಲ್ಲವೂ ಅಲ್ಲಿಂದ ಹೊರಟವು. ದಾರಿಯಲ್ಲಿ ಒಂದು ಹಳ್ಳ ರಸ್ತೆಗೆ ಅಡ್ಡವಾಗಿ ಹರಿಯುತ್ತಿತ್ತು. ಅದನ್ನು ದಾಟಲು ಸೇತುವೆ ಇರಲಿಲ್ಲ. ಏನು ಮಾಡ ಬೇಕೆಂದು ಅವು ಬಹಳ ಯೋಚಿಸಿದವು. ಕಡೆಗೆ ಹುಲ್ಲಿನ ಕಡ್ಡಿಗೆ ಒಂದು ಉಪಾಯ ಹೊಳೆಯಿತು. ಅದು "ನಾನು ಹಳ್ಳದ ಮೇಲೆ ಒಂದು ದಡದಿಂದ ಇನ್ನೊಂದು ದಡದವರೆಗೂ ಕಾಲು ಚಾಚಿ ಮಲಗುತ್ತೇನೆ. ನೀವು ನನ್ನ ಮೇಲೆ ನಡೆದು ಆಚೆಯ ದಡಕ್ಕೆ ಹೋಗಿ. ಅನಂತರ ನಾನು ಎದ್ದು ಬರುತ್ತೇನೆ" ಎಂದಿತು. ಈ ಸೂಚನೆಯನ್ನು ಕೇಳಿ ಕೆಂಡಕ್ಕೂ ಅವರೆಯ ಕಾಳಿಗೂ ಬಹಳ ಸಂತೋಷವಾಯಿತು. ಹುಲ್ಲಿನಕಡ್ಡಿ ಸೇತು ವೆಯ ಹಾಗೆ ಹಳ್ಳದ ಮೇಲೆ ಮಲಗಿತು. ಕೂಡಲೆ ಕೆಂಡ ಅದರ ಮೇಲೆ ನಡೆಯತೊಡಗಿತು. ಆದರೆ ಅರ್ಧ ದೂರ ಹೋಗುವ ಹೊತ್ತಿಗೆ ಕೆಳಗೆ ಜುಳು ಜುಳು ಎಂದು ಹರಿಯುತ್ತಿದ್ದ ನೀರನ್ನು ನೋಡಿ ಅದಕ್ಕೆ ಹೆದರಿಕೆ ಯಾಯಿತು. ಮುಂದಕ್ಕೆ ಹೆಜ್ಜೆಯಿಡಲು ಧೈರ್ಯ ಸಾಲದೆ ಅದು ಅಲ್ಲೇ ನಿಂತುಬಿಟ್ಟಿತು. ಕೆಂಡ ಒಂದೇ ಕಡೆ ನಿಂತುದರಿಂದ ಹುಲ್ಲಿನ ಕಡ್ಡಿಗೆ

ಬೆಂಕಿ ತಗುಲಿ ಅದು ಸುಟ್ಟು ಮಧ್ಯಕ್ಕೆ ಸರಿಯಾಗಿ ಮುರಿಯಿತು. ಎರಡು ತುಂಡುಗಳೂ ನೀರಿನಲ್ಲಿ ಬಿದ್ದು ತೇಲಿಹೋದವು. ಆಸರೆ ತಪ್ಪಿದ್ದರಿಂದ ಕೆಂಡವೂ ನೀರಿಗೆ ಉರುಳಿತು. ನೀರು ಸೋಕಿದ್ದೇ ತಡ, ಅದು ಚೊಯ್ಯನೆ ಅಳುತ್ತಾ ನೋವಿನಿಂದ ಒದ್ದಾಡುತ್ತಾ ಸತ್ತುಹೋಯಿತು.

ಆಗ ಅವರೆಯಕಾಳು ಇನ್ನೂ ಈಚೆಯ ದಡದ ಮೇಲೆಯೇ ಇದ್ದುದರಿಂದ ಅದು ವಿಪತ್ತಿನಿಂದ ಪಾರಾಯಿತು. ಆದರೆ ತನ್ನ ಗೆಳೆಯರಿಗೆ ಆದ ಗತಿಯನ್ನು ನೋಡಿ ಅದಕ್ಕೆ ತಡೆಯಲಾಗದಷ್ಟು ನಗು ಬಂತು. ನಕ್ಕು ನಕ್ಕು ನೆಗೆದು ನೆಗೆದು ಬಿದ್ದು ಬಿದ್ದು ಅದರ ಹೊಟ್ಟೆ ಒಡೆಯಿತು. ಅಲ್ಲೇ ದಡದ ಮೇಲೆ ಒಬ್ಬ ದರ್ಜಿ ಕುಳಿತಿದ್ದ. ಅವನು ಈ ಕಾಳಿಗೆ ಒದಗಿದ ಸ್ಥಿತಿಯನ್ನು ನೋಡದೆ ಹೋಗಿದ್ದರೆ ಅದೂ ಸತ್ತುಹೋಗುತ್ತಿತ್ತು. ಆದರೆ ಅವನಿಗೆ ಅದನ್ನು ನೋಡಿ ಕರುಣೆ ಹುಟ್ಟಿತು. ಕೂಡಲೆ ಅವನು ತನ್ನ ಜೇಬಿನಲ್ಲಿದ್ದ ಸೂಜಿ ದಾರಗಳನ್ನು ತೆಗೆದು ಅದರ ಒಡೆದ ಹೊಟ್ಟೆಯನ್ನು ಮತ್ತೆ ಕೂಡಿಸಿ ಹೊಲಿದ. ತನಗೆ ಈ ರೀತಿ ಸಹಾಯ ಮಾಡಿದ್ದಕ್ಕೆ ಅವರೆಯಕಾಳು ಕೃತಜ್ಞತೆಯಿಂದ ಅವನ ಕಾಲಿಗೆ ಬಿದ್ದು ನಮಸ್ಕಾರ ಮಾಡಿತು. ದರ್ಜಿ ಅದರ ಹೊಟ್ಟೆಯನ್ನು ಹೊಲಿಯುವುದಕ್ಕೆ ಬಿಳಿಯ ದಾರ ಉಪಯೋಗಿಸಿದ್ದ. ಆದ್ದರಿಂದಲೇ ಈಗಲೂ ಕೂಡ ಪ್ರತಿಯೊಂದು ಅವರೆಯ ಕಾಳಿನ ಪಕ್ಕೆಯ ಮೇಲೂ ಒಂದು ಬಿಳಿಯ ಗೆರೆ ಇರುತ್ತದೆ.

# ಚಿಪ್ಪಿಗನ ಮಕ್ಕಳು

ಒಂದು ಊರಿನಲ್ಲಿ ಒಬ್ಬ ಚಿಪ್ಪಿಗನಿದ್ದ. ಅವನಿಗೆ ಮೂರು ಜನ ಗಂಡುಮಕ್ಕಳಿದ್ದರು. ಅವರ ಹತ್ತಿರ ಒಂದು ಮೇಕೆಯಿತ್ತು ಅವರೆಲ್ಲರಿಗೂ ಆ ಒಂದು ಮೇಕೆಯೇ ಹಾಲು ಕೊಡಬೇಕಾಗಿತ್ತು. ಹೊಟ್ಟೆ ತುಂಬ ಚೆನ್ನಾಗಿ ತಿಂಡಿ ಬಿದ್ದ ಹೊರತು ಅದು ಅಷ್ಟು ಜನಕ್ಕೂ ಸಾಕಾಗುವಷ್ಟು ಹಾಲು ಕೊಡುತ್ತಿರಲಿಲ್ಲ. ಆದ್ದರಿಂದ ಪ್ರತಿದಿನವೂ ಅವರಲ್ಲಿ ಯಾರಾದರೂ ಒಬ್ಬರು ಅದನ್ನು ಹೊಲಗಳ ಮೇಲೆ ಹಿಡಿದುಕೊಂಡು ಹೋಗಿ ಮೇಯಿಸಿ ಕೊಂಡು ಬರುತ್ತಿದ್ದರು.

ಒಂದು ದಿನ ಚಿಪ್ಪಿಗನ ಹಿರಿಯ ಮಗ ಮೇಕೆಯನ್ನು ಮೇಯಿಸುವು ದಕ್ಕೆ ಹಿಡಿದುಕೊಂಡು ಹೋದ. ಊರ ಹೊರಗಿದ್ದ ವಿಶಾಲವಾದ ಹುಲ್ಲು ಗಾವಲಿನಲ್ಲಿ ಮೇಕೆ ದಿನವೆಲ್ಲಾ ಮೇವು ತಿಂದಿತು. ಸಾಯಂಕಾಲವಾಗಲು ಅವನು "ಮೇಕೆಯೆ, ಹೊಟ್ಟೆ ತುಂಬಿತೆ?" ಎಂದು ಕೇಳಿದ.

ಮೇಕೆ—

"ಹೊಟ್ಟೆ ತುಂಬಿತು,<br>
ತೃಪ್ತಿಯಾಯಿತು,<br>
ಇನ್ನು ಏನನು<br>
ತಿನ್ನಲಾರೆನು"

ಎಂದು ಉತ್ತರ ಕೊಟ್ಟಿತು. ಅವನು ಅದರ ಮಾತನ್ನು ನಂಬಿ, ಅದನ್ನು ಮನೆಗೆ ತಂದು ಕೊಟ್ಟಿಗೆಯಲ್ಲಿ ಕಟ್ಟಿಹಾಕಿದ.

ಸ್ವಲ್ಪ ಹೊತ್ತಾದ ಮೇಲೆ ಚಿಪ್ಪಿಗ ಮೇಕೆಯ ಹತ್ತಿರಕ್ಕೆ ಹೋಗಿ "ಮೇಕೆಯೆ, ಹೊಟ್ಟೆತುಂಬಾ ಮೇದು ಬಂದೆಯಾ?" ಎಂದು ಕೇಳಿದ.

ಅದು "ಹೊಟ್ಟೆ ಹೇಗೆ ತುಂಬುತ್ತೆ? ಅಲ್ಲಿ ಇಲ್ಲಿ ಬೇಲಿಯಲ್ಲಿದ್ದ ಒಂದೋ ಅರ್ಧವೋ ಎಲೆಯನ್ನು ಕಿತ್ತುಕೊಂಡು ತಿಂದುಬಂದೆ. ಮೈಗೆಲ್ಲಾ ಮುಳ್ಳು ತರೆದದ್ದು ಎಷ್ಟೋ ಅಷ್ಟೇ!" ಎಂದಿತು.

ಚಿಪ್ಪಿಗನಿಗೆ ಮಗನ ಮೇಲೆ ಬಹಳ ಸಿಟ್ಟು ಬಂತು. ಅವನು ನೇರವಾಗಿ ಆ ಹುಡುಗ ಇದ್ದ ಕಡೆಗೆ ಹೋಗಿ, "ಕಳ್ಳ! ಮೇಕೆ ಹೊಟ್ಟೆ ತುಂಬುವವರೆಗೂ ಮೇವುತಿಂದಿತು ಎಂತ ಸುಳ್ಳುಹೇಳಿ ಅದನ್ನು ಹಾಗೆಯೇ ತಂದು ಕಟ್ಟಿಹಾಕಿದ್ದೀಯಾ?" ಎಂದು ಗದರಿಸಿ, ತಾನು ಬಟ್ಟೆಯನ್ನು ಅಳತೆಮಾಡಲು ಉಪಯೋಗಿಸುತ್ತಿದ್ದ ಅಡಿಕಡ್ಡಿಯನ್ನು ತೆಗೆದುಕೊಂಡು, ಅದರಿಂದ ಅವನನ್ನು ಚೆನ್ನಾಗಿ ಬಾರಿಸಿ, ಮನೆಯಿಂದ ಓಡಿಸಿಬಿಟ್ಟ.

ಮಾರನೆಯ ದಿನ ಎರಡನೆಯ ಮಗ ಹೋಗಬೇಕಾಯಿತು. ಅವನು ದಟ್ಟವಾಗಿ ಸೊಂಪಾಗಿ ಹೊಸ ಹುಲ್ಲು ಬೆಳೆದಿದ್ದ ಸ್ಥಳವನ್ನು ಆರಿಸಿ, ಅಲ್ಲಿ ಮೇಕೆಯನ್ನು ಬೆಳಗಿನಿಂದ ಸಂಜೆಯಾಗುವವರೆಗೂ ಮೇಯಿಸಿ, ಮನೆಗೆ ಹೋಗುವ ಹೊತ್ತಾದಾಗ "ಮೇಕೆಯೆ, ಹೊಟ್ಟೆ ತುಂಬಿತೆ?" ಎಂದು ಕೇಳಿದ.

ಮೇಕೆ—

"ಹೊಟ್ಟೆ ತುಂಬಿತು,
ತೃಪ್ತಿಯಾಯಿತು,
ಇನ್ನು ಏನನು
ತಿನ್ನಲಾರೆನು"

ಎಂದಿತು. ಅವನು ಅದನ್ನು ಮನೆಗೆ ತಂದು ಕಟ್ಟಿಹಾಕಿದ.

ಹಿಂದಿನ ದಿವಸದಂತೆಯೇ ಚಿಪ್ಪಿಗ ಮೇಕೆಯ ಬಳಿಗೆ ಹೋಗಿ, "ಮೇಕೆಯೆ, ಹೊಟ್ಟೆ ತುಂಬಾ ಮೇದು ಬಂದೆಯಾ?" ಎಂದು ಕೇಳಿದ.

ಅದು "ಹೊಟ್ಟೆ ಹೇಗೆ ತುಂಬುತ್ತೆ? ಅಲ್ಲಿ ಇಲ್ಲಿ ಬೇಲಿಯಲ್ಲಿದ್ದ ಒಂದೋ ಅರ್ಧವೋ ಎಲೆಯನ್ನು ಕಿತ್ತುಕೊಂಡು ತಿಂದು ಬಂದೆ. ಮೈಗೆಲ್ಲಾ ಮುಳ್ಳು ತರೆದದ್ದು ಎಷ್ಟೋ ಅಷ್ಟೇ!" ಎಂದಿತು.

"ಎಲಾ ಮೋಸಗಾರ! ಇಂಥ ಪ್ರಾಣಿಯನ್ನು ಹೊಟ್ಟೆಗೆ ಹಾಕದೆ ಸಾಯಿಸುತ್ತಾರಲ್ಲ!" ಎಂದುಕೊಳ್ಳುತ್ತಾ ಚಿಪ್ಪಿಗ ಒಳಕ್ಕೆ ಓಡಿ, ಎರಡನೆಯ ಮಗನನ್ನೂ ಅಡಿಕಡ್ಡಿಯಿಂದ ಹೊಡೆದು ಅಟ್ಟಿದ.

ಮಾರನೆಯ ದಿನ ಮೂರನೆಯ ಮಗನ ಸರದಿ ಬಂತು. ಅವನು ಮೊದಲೆ ಎಚ್ಚರಿಕೆಯಿಂದ ಇರೋಣವೆಂದು ಯೋಚಿಸಿ ಮೇಕೆಯನ್ನು ಒಂದು ದೊಡ್ಡ ಮರದ ನೆರಳಿಗೆ ಕರೆದುಕೊಂಡು ಹೋಗಿ ಆ ಮರದ ಎಲೆಯನ್ನು ಅದು ತಿಂದು ಸಾಕಾಗುವವರೆಗೂ ಕಿತ್ತುಹಾಕಿದ. ತಿಂದು ತಿಂದು ಮೇಕೆಯ ಹೊಟ್ಟೆ ಗುಡಾಣದ ಹಾಗೆ ಉಬ್ಬಿತು. ಸಂಜೆಯಾದ ಕೂಡಲೆ ಅವನು ತನ್ನ ಅಣ್ಣಂದಿರಂತೆಯೆ "ಮೇಕೆಯೆ, ಹೊಟ್ಟೆ ತುಂಬಿತೆ?" ಎಂದು ಕೇಳಿದ.

ಮೇಕೆ—

"ಹೊಟ್ಟೆ ತುಂಬಿತು,<br>ತೃಪ್ತಿಯಾಯಿತು,<br>ಇನ್ನು ಏನನು<br>ತಿನ್ನಲಾರೆನು"

ಎಂದಿತು. ಅವನು ಅದನ್ನು ಮನೆಗೆ ತಂದು ಕಟ್ಟಿಹಾಕಿದ.

ಒಂದೆರಡು ಕ್ಷಣದಲ್ಲೇ ಚಿಪ್ಪಿಗ ಬಂದು ಎಂದಿನಂತೆಯೇ "ಮೇಕೆಯೆ, ಹೊಟ್ಟೆತುಂಬಾ ಮೇದು ಬಂದೆಯಾ?" ಎಂದು ಕೇಳಿದ.

ಅದು ಮೊದಲಿನಂತೆಯೇ "ಹೊಟ್ಟೆ ಹೇಗೆ ತುಂಬುತ್ತೆ? ಅಲ್ಲಿ ಇಲ್ಲಿ ಬೇಲಿಯಲ್ಲಿದ್ದ ಒಂದೋ ಅರ್ಧವೋ ಎಲೆಯನ್ನು ಕಿತ್ತುಕೊಂಡು ತಿಂದು ಬಂದೆ. ಮೈಗೆಲ್ಲಾ ಮುಳ್ಳು ತರೆದದ್ದು ಎಷ್ಟೋ ಅಷ್ಟೇ!" ಎಂದಿತು.

"ಎಲಾ ಕೊರಮ!" ಎನ್ನುತ್ತ ಚಿಪ್ಪಿಗ ಮನೆಯೊಳಕ್ಕೆ ನುಗ್ಗಿ ಮಗನ ಬೆನ್ನಿನ ಮೇಲೆ ಗುರುತು ಮೂಡುವವರೆಗೂ ಹೊಡೆದ. ಪಾಪ, ಆ ಹುಡುಗ ಕಿರಿಚಿಕೊಂಡು ಓಡಿಹೋದ.

ಆಮೇಲೆ ಚಿಪ್ಪಿಗನೇ ಮೇಕೆಯನ್ನು ಮೇಯಿಸಿಕೊಂಡು ಬರಬೇಕಾಯಿತು. ಮಾರನೆಯ ದಿನ ಬೆಳಗಾದ ಕೂಡಲೆ ಅವನು ಕೊಟ್ಟಿಗೆಗೆ ಹೋಗಿ ಮೇಕೆಯ ಮೈಮೇಲೆಲ್ಲಾ ಕೈಯಾಡಿಸುತ್ತಾ "ನನ್ನ ಕಂದಮ್ಮ,

ಈ ದಿನ ನಾನೇ ನಿನ್ನನ್ನು ಆಡಿಸಿಕೊಂಡು ಬರುತ್ತೇನೆ, ಬಾ” ಎಂದು ಅಚರ ಕತ್ತಿಗೆ ಕಟ್ಟಿದ್ದ ಹಗ್ಗವನ್ನು ಕೈಗೆ ತೆಗೆದುಕೊಂಡು ಹೊರಟ. ಊರಿಗೆ ಸ್ವಲ್ಪ ದೂರದಲ್ಲೇ ಸೊಗಸಾದ ಗಿಡಗಳು ಬೆಳೆದಿದ್ದ ಒಂದು ವನವೇ ಇತ್ತು. ಚಿಪ್ಪಿಗ ಮೇಕೆಯನ್ನು ಅಲ್ಲಿಗೆ ಹಿಡಿದುಕೊಂಡು ಹೋಗಿ, ಅಲ್ಲಿ ಬೆಳೆದಿದ್ದ ಚಿಗುರೆಲೆಯನ್ನು ಹಗಲೆಲ್ಲಾ ಅದಕ್ಕೆ ತಿನ್ನಿಸಿದ. ಬೈಗಾಯಿತು. ಚಿಪ್ಪಿಗ ಅವನ ಮಕ್ಕಳು ಕೇಳುತ್ತಿದ್ದಂತೆಯೇ “ಮೇಕೆಯೆ, ಹೊಟ್ಟೆತುಂಬಿತೆ?” ಎಂದ.

ಅದು—

“ಹೊಟ್ಟೆ ತುಂಬಿತು,<br>ತೃಪ್ತಿಯಾಯಿತು,<br>ಇನ್ನು ಏನನು<br>ತಿನ್ನಲಾರೆನು”

ಎಂದಿತು. ಅವನು ಅದನ್ನು ಕೊಟ್ಟಿಗೆಗೆ ತಂದು ಕಟ್ಟಿಹಾಕಿದ. ಕೊಟ್ಟಿಗೆಯಿಂದ ಮನೆಯ ಒಳಕ್ಕೆ ಹೋಗುವ ಮುಂಚೆ “ಹೊಟ್ಟೆ ತುಂಬಿತೋ ಇಲ್ಲವೋ ಇನ್ನೊಂದು ಸಾರಿ ಕೇಳಿಬಿಡೋಣ, ಪಾಪ!” ಎನ್ನಿಸಿತು. ಹಿಂತಿರುಗಿ “ಮೇಕೆಯೆ, ಈ ದಿವಸವಾದರೂ ತೃಪ್ತಿಯಾಯಿತೆ?” ಎಂದ.

ಅದು “ತೃಪ್ತಿ ಹೇಗೆ ಆಗುತ್ತೆ? ಅಲ್ಲಿ ಇಲ್ಲಿ ಬೇಲಿಯಲ್ಲಿದ್ದ ಒಂದೋ ಅರ್ಧವೋ ಎಲೆಯನ್ನು ಕಿತ್ತುಕೊಂಡು ತಿಂದು ಬಂದೆ. ಮೈಗೆಲ್ಲಾ ಮುಳ್ಳು ತರೆದದ್ದು ಎಷ್ಟೋ ಅಷ್ಟೇ!” ಎಂದಿತು.

ಈ ಮಾತನ್ನು ಕೇಳಿದ ಕೂಡಲೆ ಚಿಪ್ಪಿಗನ ಹೊಟ್ಟೆಯಲ್ಲಿ ಸುಣ್ಣ ಹಾಕಿದ ಹಾಗಾಯಿತು. ತನ್ನ ಮಕ್ಕಳನ್ನೆಲ್ಲಾ ಅನ್ಯಾಯವಾಗಿ ಮನೆಯಿಂದ ದೂಡಿಬಿಟ್ಟದ್ದೆನೆಂದು ಅವನಿಗೆ ಹೊಳೆಯಿತು. ಮೇಕೆಯ ಮೇಲೆ ಅವನಿಗೆ ಮಿತಿಮೀರಿದ ಕೋಪ ಬಂತು. ಅವನು “ಅಯ್ಯೋ, ರುಣಪಾತಕಿ! ನಿನಗೋಸ್ಕರ ನನ್ನ ಮಕ್ಕಳನ್ನೆಲ್ಲಾ ಓಡಿಸಿದೆ. ಈಗ ನಿನ್ನನ್ನು ಸುಮ್ಮನೆ ಓಡಿಸಿದರೆ ಸಾಲದು. ಇನ್ನು ಮೇಲೆ ಯಾರೂ ನಿನ್ನನ್ನು ಹತ್ತಿರ

ಬರಗೊಡದ ಹಾಗೆ ಮಾಡಿ ಕಳುಹಿಸುತ್ತೇನೆ!'' ಎನ್ನುತ್ತಾ ಕತ್ತರಿ ತೆಗೆದು ಕೊಂಡು ಅದರ ತಲೆಯ ಮೇಲಿದ್ದ ಕೂದಲನ್ನೆಲ್ಲಾ ನುಣ್ಣಗೆ ಕತ್ತರಿಸಿ ಹಾಕಿದ. ಅದನ್ನು ಅಡಿಕಡ್ಡಿಯಿಂದ ಹೊಡೆದರೆ ಸಾಲದು ಎಂದುಕೊಂಡು ಒಂದು ಬಾರುಕೋಲನ್ನು ತಂದು ಮುಖ ಮೂತಿ ನೋಡದೆ ಬಿಗಿದ. ಅದು ಒಂದು ಮೈಲಿ ದೂರ ಕೇಳಿಸುವಷ್ಟು ಗಟ್ಟಿಯಾಗಿ ಅರಚುತ್ತಾ ಓಡಿಹೋಯಿತು.

ಮುದುಕನಿಗೆ ಬಹಳ ವ್ಯಸನವಾಯಿತು. ಮಕ್ಕಳೆಲ್ಲಾ ಹಿಂದಿರುಗಿ ಬಂದರೆ ಸಾಕು ಎನ್ನಿಸಿತು. ಆದರೆ ಅವರು ಎಲ್ಲಿದ್ದರು, ಯಾವ ಕಡೆಗೆ ಹೋದರು ಎಂದು ಕೂಡ ಆ ಊರಿನಲ್ಲಿ ಯಾರಿಗೂ ಗೊತ್ತಾಗಲಿಲ್ಲ.

ಚಿಪ್ಪಿಗನ ಹಿರಿಯ ಮಗ ಮನೆಯಿಂದ ಓಡಿದವನು ಯಾವುದೋ ಊರಿನಲ್ಲಿ ಒಬ್ಬ ಕಂಚುಗಾರನ ಹತ್ತಿರ ಸೇರಿಕೊಂಡು ಕೆಲಸ ಕಲಿಯುತ್ತಿದ್ದ. ಕೆಲವು ದಿನಗಳ ನಂತರ ಅವನು ಗೊತ್ತುಮಾಡಿಕೊಂಡಿದ್ದ ಕಾಲದ ಅವಧಿ ಮುಗಿಯಿತು. ಆಗ ಕಂಚುಗಾರ ಅವನಿಗೆ ಒಂದು ಕಂಚಿನ ತಟ್ಟೆ ಕೊಟ್ಟ. ಆ ತಟ್ಟೆಯನ್ನು ಎದುರಿಗೆ ಇಟ್ಟುಕೊಂಡು "ತಟ್ಟೆಯೆ, ಊಟ ಸಿದ್ಧವಾಗಲಿ" ಎಂದರೆ ಸಾಕು, ಅದರೊಳಗೆ ಒಳ್ಳೊಳ್ಳೆಯ ತಿಂಡಿಯ ಪದಾರ್ಥಗಳೆಲ್ಲಾ ಬಂದು ಬಿಡುತ್ತಿದ್ದವು. ಒಂದು ತಿಂಡಿ ಮುಗಿದರೆ ತಕ್ಷಣ ಅದೇ ತಿಂಡಿ ಮತ್ತೆ ಬಂದು ಕೂತಿರುತ್ತಿತ್ತು. ಅವನು "ಸಾಕು" ಎನ್ನುವವರೆಗೂ ತಟ್ಟೆ ಬರಿದಾಗುತ್ತಿರಲಿಲ್ಲ. "ನಾನು ಇನ್ನು ಬದುಕಿರುವಷ್ಟು ದಿನವೂ ತಾಪ ತ್ರಯವೇ ಇಲ್ಲ!" ಎಂದುಕೊಂಡು ಚಿಪ್ಪಿಗನ ಮಗ ಆ ತಟ್ಟೆಯನ್ನು ತೆಗೆದುಕೊಂಡು ಹೊರಟ. ಅವನಿಗೆ ಮತ್ತೆ ಅಪ್ಪನ ಮನೆಗೆ ಹೋಗಬೇಕು ಎನ್ನಿಸಿತು. "ಇಷ್ಟು ಹೊತ್ತಿಗೆ ಅವನ ಕೋಪವೆಲ್ಲಾ ಇಳಿದಿರುತ್ತದೆ. ಇನ್ನುಮೇಲೆ ನಾವೆಲ್ಲಾ ಬೇಕುಬೇಕಾದುದನ್ನು ತಿಂದುಕೊಂಡು ಸುಖವಾಗಿರಬಹುದು" ಎಂದು ಯೋಚಿಸುತ್ತಾ ಊರಿನ ಕಡೆ ತಿರುಗಿದ.

ದಾರಿಯಲ್ಲಿ ಕತ್ತಲಾಗುವ ಹೊತ್ತಿಗೆ ಒಂದು ಹಳ್ಳಿ ಸಿಕ್ಕಿತು. ಆ ಹಳ್ಳಿಯ ಮುಂದುಗಡೆಯೇ ಊರ ಗೌಡನ ಮನೆ ಇತ್ತು. ಚಿಪ್ಪಿಗನ ಮಗ ಅಲ್ಲಿಗೆ ಬಂದಾಗ ನಾಲ್ಕೈದು ಜನ ಹಳ್ಳಿಯವರು ಗೌಡನ ಮನೆಯ

ಜಗಲಿಯ ಮೇಲೆ ಕುಳಿತು ಮನೆಯ ಯಜಮಾನನೊಡನೆ ಮಾತಾಡು ತ್ತಿದ್ದರು. ಚಿಪ್ಪಿಗನ ಮಗ ಅವರ ಹತ್ತಿರ ಹೋಗಿ ಆ ರಾತ್ರಿ ಅಲ್ಲಿ ಇಳಿದು ಕೊಳ್ಳಲು ಸ್ವಲ್ಪ ಸ್ಥಳ ಕೊಡಬೇಕೆಂದು ಬೇಡಿದ. ಗೌಡ "ಅದಕ್ಕೇನಂತೆ, ನಮ್ಮ ಜಗಲಿಯ ಮೇಲೆಯೇ ಬೇಕಾದಷ್ಟು ಸ್ಥಳವಿದೆ. ಇಲ್ಲೇ ಮಲಗಿದ್ದು ಹೋಗು. ಬಾ, ಕೂತುಕೊ" ಎಂದು ಕರೆದು ಉಪಚಾರಮಾಡಿದ. ಎಲ್ಲರೂ ರಾತ್ರಿ ಊಟಕ್ಕೆ ಹೊರಡುವ ಸಮಯವಾಯಿತು. ಹಳ್ಳಿಯವರು ಚಿಪ್ಪಿಗನ ಮಗನನ್ನು "ನಮ್ಮ ಮನೆಗೆ ಬಾ," "ನಮ್ಮ ಮನೆಗೆ ಬಾ" ಎಂದು ಊಟಕ್ಕೆ ಕರೆದರು. ಅವನು "ನಾನು ಬೇರೆ ಜಾತಿಯವರ ಮನೆಯಲ್ಲಿ ಊಟ ಮಾಡುವುದಿಲ್ಲ. ಏನೂ ಚಿಂತೆಯಿಲ್ಲ, ನನ್ನ ವಿಷಯ ನೀವೇನೂ ಯೋಚಿಸಬೇಡಿ, ಎಲ್ಲಾ ಮನೆಗೆ ಹೊರಡಿ, ಊಟಕ್ಕೆ ಹೊತ್ತಾಗುತ್ತದೆ" ಎಂದು ಪುಸಲಾಯಿಸಿದ ಇವನ ಅರ್ಥ ಅವರ ತಲೆಗೆ ಹಿಡಿಸಲಿಲ್ಲ. ಗೌಡ "ನಮ್ಮ ಮನೆಯಲ್ಲಿ ಮಾಡಿದ್ದನ್ನು ಊಟ ಮಾಡ ದಿದ್ದರೆ ಹೋಗಲಿ. ಇಲ್ಲೇ ನಿಮ್ಮ ಜನದ ಮನೆ ಒಂದು ಇದೆ. ಅಲ್ಲಿ ಹೇಳುತ್ತೇನೆ. ಇಲ್ಲದಿದ್ದರೆ ಸಾಮಾನು ಕೊಡುತ್ತೇನೆ, ಅಡಿಗೆಯಾದರೂ ಮಾಡಿಕೊ. ನಮ್ಮ ಊರಿಗೆ ಬಂದವರು ಯಾರೂ ಉಪವಾಸ ಇದ್ದು ಹೋಗಕೂಡದು. ಅದು ಇಲ್ಲಿಯ ಕಟ್ಟಳೆ" ಎಂದು ಬಲವಂತ ಮಾಡಿದ. ಚಿಪ್ಪಿಗ "ಅಡುಗೆ ಮಾಡುವ ಅಗತ್ಯವೇನೂ ಇಲ್ಲ. ಬೇಕಾದರೆ ಈ ಕ್ಷಣವೇ ನಿಮಗೆಲ್ಲಾ ಆಗುವಷ್ಟು ಊಟ ಬಡಿಸಬಲ್ಲೆ!" ಎಂದು ಜಂಭದಿಂದ ಹೇಳಿದ. ಅವರೆಲ್ಲಾ ಆಶ್ಚರ್ಯದಿಂದ "ಅದು ಹೇಗೆ?" ಎಂದರು. "ತೋರಿಸುತ್ತೇನೆ, ತಾಳಿ'' ಎಂದು ಅವನು ತನ್ನ ತಟ್ಟೆಯನ್ನು ಮುಂದಿಟ್ಟುಕೊಂಡು "ತಟ್ಟೆಯೆ, ಊಟ ಸಿದ್ಧವಾಗಲಿ'' ಎಂದ. ಕೂಡಲೆ ಅದರ ತುಂಬಾ ರುಚಿರುಚಿಯಾದ ಬಗೆಬಗೆಯ ಪದಾರ್ಥಗಳು ಕಾಣಿಸಿ ಕೊಂಡವು. ಅಲ್ಲಿದ್ದವರೆಲ್ಲಾ ಅವನ್ನು ತಿಂದು ತೇಗಿದರು.

ಗೌಡನಿಗೆ ಈ ತಟ್ಟೆಯನ್ನು ನೋಡಿ ಬಾಯಲ್ಲಿ ನೀರೂರಿತು. ಅವನು "ಈ ತಟ್ಟೆ ನನಗೆ ಸಿಕ್ಕಿಬಿಟ್ಟರೆ ಆಮೇಲೆ ಯಾವ ಕಷ್ಟವೂ ಇರುವುದಿಲ್ಲ. ಮನೆಗೆ ಎಷ್ಟು ಜನ ಬಂದರೂ ಕಾಸು ಖರ್ಚಿಲ್ಲದೆ ಊಟ ಹಾಕಬಹುದು. ಈ ಸೀಮೆಗೆಲ್ಲಾ ನಾನೇ ಸಾಹುಕಾರನಾಗಬಹುದು.

ಏನಾದರೂ ಮಾಡಿ ಇದನ್ನು ಹೊಡೆಯಬೇಕು'' ಎಂದು ತನ್ನಲ್ಲಿ ತಾನೇ ಯೋಚಿಸತೊಡಗಿದ.

ರಾತ್ರಿ ಮಲಗುವಾಗ ಚಿಪ್ಪಿಗನ ಮಗ ತನ್ನ ತಟ್ಟೆಯನ್ನು ತಲೆಯ ಕೆಳಗೆ ಗೋಡೆಗೆ ಒರಗಿಸಿಟ್ಟು ನಿದ್ದೆಹೋದ. ಮಧ್ಯರಾತ್ರಿಯಾಯಿತು. ಅವನಿಗೆ ಚೆನ್ನಾಗಿ ನಿದ್ದೆ ಹತ್ತಿತ್ತು. ಆಗ ಗೌಡ ಮೆಲ್ಲಗೆ ಒಳಗಿನಿಂದ ಒಂದು ತಟ್ಟೆಯನ್ನು ಹಿಡಿದುಕೊಂಡು ಬಂದು ಅದನ್ನು ಚಿಪ್ಪಿಗನ ಮಗನ ತಟ್ಟೆ ಇದ್ದ ಕಡೆ ಸದ್ದುಮಾಡದೆ ಇಟ್ಟು, ಅವನ ತಟ್ಟೆಯನ್ನು ತಾನು ತೆಗೆದುಕೊಂಡು ಹೋದ.

ಮರುದಿನ ಚಿಪ್ಪಿಗನ ಮಗ ಇನ್ನೂ ಮಬ್ಬು ಇರುವಾಗಲೇ ಎದ್ದು ಗೋಡೆಗೆ ಒರಗಿಸಿಟ್ಟಿದ್ದ ತಟ್ಟೆಯನ್ನು ಒಂದು ಬಟ್ಟೆಯಲ್ಲಿ ಗಂಟು ಕಟ್ಟಿ ಹೆಗಲಿಗೆ ಹಾಕಿಕೊಂಡು ಅವಸರವಸರವಾಗಿ ಊರ ಕಡೆಗೆ ಹೊರಟ. ಅವನು ತನ್ನ ತಂದೆಯ ಮನೆಗೆ ಬಂದಾಗ ಮಧ್ಯಾಹ್ನವಾಗಿತ್ತು. ಮುದುಕ ಅವನನ್ನು ಪ್ರೀತಿಯಿಂದಲೂ ಸಂತೋಷದಿಂದಲೂ ಬರಮಾಡಿಕೊಂಡ.

ಮಗ ಸ್ವಲ್ಪ ಹೊತ್ತು ಸುದಾರಿಸಿಕೊಂಡಮೇಲೆ ಮುದುಕ ಅವನನ್ನು "ಇಷ್ಟು ದಿನ ತಿರುಗಾಡಿಕೊಂಡು ಹೋಗಿದ್ದೆಯಲ್ಲಾ ಏನು ತಂದಿರುವೆ?'' ಎಂದು ಕೇಳಿದ.

ಹುಡುಗ "ಇಗೋ, ಈ ತಟ್ಟೆಯನ್ನು" ಎಂದು ಅದನ್ನು ತೋರಿದ.

ಮುದುಕ ಅದನ್ನು ಕೈಯಲ್ಲಿ ತೆಗೆದುಕೊಂಡು ಹಿಂದು ಮುಂದೆ ತಿರುಗಿಸಿ ನೋಡಿ, ''ಇದೇನಯ್ಯಾ, ಯಾರ ಮನೆಯದೋ ಊಟದ ತಟ್ಟೆ! ಎಷ್ಟು ದಿವಸದ್ದೋ ಏನೋ! ತಿಕ್ಕಿ ತಿಕ್ಕಿ ನುಣ್ಣಗೆ ಸವೆದು ಹೋಗಿದೆ!'' ಎಂದ.

ಮಗ ''ಆದರೇನು? ಅದನ್ನು ನನ್ನ ಎದುರಿಗೆ ಇಟ್ಟುಕೊಂಡು 'ಊಟ ಸಿದ್ಧವಾಗಲಿ' ಎಂದರೆ ತಟ್ಟೆ ತುಂಬಿಬಿಡುತ್ತೆ. ಬೇಕಾದರೆ ತೋರಿಸುತ್ತೇನೆ. ನಿನ್ನ ಸ್ನೇಹಿತರನ್ನೆಲ್ಲಾ ಕರೆಸು. ಪಾಪ, ಅವರೂ ತಿನ್ನಲಿ ರುಚಿರುಚಿಯಾದ ಪದಾರ್ಥಗಳನ್ನು!'' ಎಂದ.

ಸಾಯಂಕಾಲ ಚಿಪ್ಪಿಗನ ಸ್ನೇಹಿತರೆಲ್ಲಾ ಈ ಆಶ್ಚರ್ಯವನ್ನು ನೋಡಲು ನೆರೆದರು. ಅವನ ಮಗ ಅವರ ಎದುರಿಗೆ ತಟ್ಟೆಯನ್ನು ಇಟ್ಟು ಕುಳಿತುಕೊಂಡು "ತಟ್ಟೆಯೆ, ಊಟ ಸಿದ್ಧವಾಗಲಿ'' ಎಂದ. ತಟ್ಟೆ ಬರಿದಾಗಿಯೇ ಇತ್ತು. ಅವನು ದರ್ಪದಿಂದ ಇನ್ನೊಂದು ಸಾರಿ ಕೂಗಿದ. ಏನೂ ಪ್ರಯೋಜನವಾಗಲಿಲ್ಲ. ಆಗ ಅವನಿಗೆ ತಟ್ಟೆ ಬದಲಾಯಿಸಲ್ಪಟ್ಟಿದ್ದ ಸಂಗತಿ ಹೊಳೆಯಿತು. ಬಹಳ ನಾಚಿಕೆಯಾಯಿತು. ಬಂದಿದ್ದವರೆಲ್ಲಾ ಅವನನ್ನು ಹಾಸ್ಯಮಾಡಿ ಹೊಟ್ಟೆ ಹುಣ್ಣಾಗುವಂತೆ ನಕ್ಕು ಮನೆಗೆ ಹೋದರು. ಪಾಪ! ಚಿಪ್ಪಿಗ ಮತ್ತೆ ಹಳೆಯ ಅಂಗಿಗಳಿಗೆ ಹೊಲಿಗೆ ಹಾಕಿ ದುಡ್ಡು ಸಂಪಾದಿಸಬೇಕಾಯಿತು. ಮಗನೂ ಒಂದು ಕೆಲಸ ಹುಡುಕಿಕೊಂಡ.

ಇಷ್ಟರಲ್ಲಿ ಚಿಪ್ಪಿಗನ ಎರಡನೆಯ ಮಗ ಒಬ್ಬ ಅಗಸರವನ ಹತ್ತಿರ ಬಟ್ಟೆ ಒಗೆಯುತ್ತಿದ್ದ. ಅವನ ಕೆಲಸದ ಅವಧಿ ಮುಗಿದಾಗ ಅಗಸ ಅವನಿಗೆ ಒಂದು ಕತ್ತೆಯನ್ನು ಬಹುಮಾನವಾಗಿ ಕೊಟ್ಟು "ಈ ಕತ್ತೆ ಗಾಡಿ ಎಳೆಯು ಲಾರದು, ಹೊರೆ ಹೊರಲಾರದು. ಆದರೂ ಇದು ಬಹಳ ಪ್ರಯೋಜನ ಕಾರಿಯಾದ ಪ್ರಾಣಿ. ನೀನು ಬಹಳ ಚೆನ್ನಾಗಿ ಕೆಲಸಮಾಡಿರುವೆ. ಆದ್ದರಿಂದ ಇದನ್ನು ನಿನಗೆ ಕೊಡುತ್ತೇನೆ'' ಎಂದ.

"ಗಾಡಿ ಎಳೆಯಲಾರದು! ಭಾರ ಹೊರಲಾರದು! ಇಂಥ ಕತ್ತೆ ಯನ್ನು ಕಟ್ಟಿಕೊಂಡು ನಾನೇನು ಮಾಡಲಿ? ಅದಕ್ಕೆ ಹುಲ್ಲು ನೀರು ನೋಡಿಕೊಳ್ಳುವುದು ಒಂದು ದಂಡ!" ಎಂದು ಚಿಪ್ಪಿಗನ ಮಗ ಅನುಮಾನಿಸಿದ.

ಅಗಸ "ಹೆದರಬೇಡ! ಇದರಿಂದ ನೀನು ಲಕ್ಷಾಧೀಶ್ವರನಾಗ ಬಹುದು. ಇದು ಬಾಯಿ ತೆರೆದರೆ ರೂಪಾಯಿ ಬೀಳುತ್ತೆ. ಅದರ ಬಾಯಿ ಕೆಳಗೆ ಒಂದು ಚೀಲ ಇಟ್ಟು 'ರೂಪಾಯಿ! ರೂಪಾಯಿ!' ಎಂದರೆ ಸಾಕು, ಆಲಿಕಲ್ಲು ಮಳೆ ಸುರಿದ ಹಾಗೆ ನಾಣ್ಯಗಳು ಉದುರುತ್ತವೆ" ಎಂದ.

ಹುಡುಗನ ಅನುಮಾನ ಬಗೆಹರಿಯಿತು. ಹೆದರಿಕೆ ಮಾಯ ವಾಯಿತು. ಅವನು ಮಾತಾಡದೆ ಕತ್ತೆಯನ್ನು ಹಿಡಿದುಕೊಂಡು ಹೊರಟ.

ಆ ದಿನದಿಂದ ಅವನು ಏನು ವ್ಯಾಪಾರ ಮಾಡಿ ಕೊಂಡುಕೊಂಡರೂ ಅದು ಅತ್ಯುತ್ತಮವಾದ ವಸ್ತುವೇ ಆಗಿರಬೇಕಾಗಿತ್ತು. ಪ್ರತಿದಿವಸವೂ ಅವನಿಗೆ ಹೋಳಿಗೆ ಪಾಯಸದ ಅಡುಗೆಯೇ ಬೇಕಾಯಿತು. ಅವನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು.

ಒಂದೆರಡು ದಿನ ಅಲ್ಲಿ ಇಲ್ಲಿ ಮೋಜು ಮಾಡಿಕೊಂಡು ಅಲೆದ ನಂತರ ಈ ಹುಡುಗನಿಗೂ ಊರಿಗೆ ಹೋಗಿ ಅಪ್ಪನನ್ನು ನೋಡಬೇಕು ಎನ್ನಿಸಿತು. "ನಮ್ಮ ತಂದೆ ಇಷ್ಟುಹೊತ್ತಿಗೆ ನನ್ನ ಮೇಲಿನ ಸಿಟ್ಟನ್ನೆಲ್ಲಾ ಮರೆತುಬಿಟ್ಟಿರುತ್ತಾನೆ. ಅದೂ ಅಲ್ಲದೆ ನಾನು ಈಗ ಕೇಳಿದಷ್ಟು ರೂಪಾಯಿ ಕೊಡುವ ಕತ್ತೆಯನ್ನು ಬೇರೆ ತೆಗೆದುಕೊಂಡು ಹೋಗು ತ್ತಿದ್ದೇನೆ. ಅವನು ನನ್ನನ್ನು ಪ್ರೀತಿಯಿಂದ ಬರಮಾಡಿಕೊಳ್ಳುವುದು ಖಂಡಿತ" ಎಂದು ಯೋಚಿಸಿ ಊರ ಕಡೆಗೆ ಹೆಜ್ಜೆಯಿಟ್ಟ.

ದಾರಿಯಲ್ಲಿ ಅವನು ಹಿಂದೆ ಅವರ ಅಣ್ಣ ಬಂದಿದ್ದ ಹಳ್ಳಿಗೇ ಬಂದ. ಹಿಂದಿನಂತೆಯೇ ಗೌಡ ಮನೆಯ ಜಗಲಿಯ ಮೇಲೆ ಕುಳಿತಿದ್ದ. ಆದರೆ ಈ ಸಾರಿ ಅವನ ಜೊತೆಗೆ ಇನ್ನಾರೂ ಇರಲಿಲ್ಲ. ಏನೋ ಯೋಚಿಸು ತ್ತಿದ್ದ ಗೌಡನನ್ನು ಕಂಡು ಚಿಪ್ಪಿಗನ ಮಗ ಅವನ ಹತ್ತಿರಕ್ಕೆ ಹೋಗಿ "ಅಯ್ಯಾ. ಈ ದಿನ ಇಲ್ಲಿ ಇಳಿದುಕೊಳ್ಳುವುದಕ್ಕೆ ಸ್ವಲ್ಪ ಸ್ಥಳ ಕೊಡು ತ್ತೀಯಾ? ಬೇಕಾದರೆ ಅದಕ್ಕೆ ಎಷ್ಟು ಕೇಳುತ್ತೀಯೋ ಅಷ್ಟು ದುಡ್ಡು ಕೊಡುತ್ತೇನೆ" ಎಂದ.

ಗೌಡ "ಆಗಲಪ್ಪ, ಅದಕ್ಕೇನು. ಇಲ್ಲೇ ನಮ್ಮ ಜಗಲಿಯ ಮೇಲೆ ಬೇಕಾದಷ್ಟು ಸ್ಥಳವಿದೆ. ಬಾ ಮೇಲಕ್ಕೆ" ಎಂದು ಅವನ ಕೈಯಲ್ಲಿದ್ದ ಕತ್ತೆಯ ಹಗ್ಗವನ್ನು ತಾನು ತೆಗೆದುಕೊಂಡ. ಚಿಪ್ಪಿಗನ ಮಗ "ಅದನ್ನು ಎಲ್ಲಿ ಕಟ್ಟುತ್ತೀಯ, ತೋರಿಸು. ನಾನು ಅದನ್ನು ಕಟ್ಟಿರುವ ಸ್ಥಳವನ್ನು ನೋಡಿರಬೇಕು" ಎಂದ. ಇದನ್ನು ಕೇಳಿ ಗೌಡನಿಗೆ "ಏಕಿರಬಹುದು?" ಎನ್ನಿಸಿತು. ಆದರೂ ಅವನು ಬಹಳ ಒಳ್ಳೆಯವನಂತೆ ನಟನೆ ಮಾಡುತ್ತ, ಚಿಪ್ಪಿಗನ ಮಗನನ್ನು ಮನೆಯ ಹಿಂದುಗಡೆ ಇದ್ದ ಒಂದು ದನದ ಕೋಣೆಗೆ ಕರೆದುಕೊಂಡು ಹೋಗಿ "ಇಗೋ, ಇಲ್ಲಿ ಕಟ್ಟುತ್ತೇನೆ. ಬೇಕಾದಷ್ಟು ಹುಲ್ಲು ನೀರು ಇದೆ, ನೋಡು" ಎಂದ. ಚಿಪ್ಪಿಗನ

ಮಗನಿಗೆ ಸಮಾಧಾನವಾಯಿತು. ವಾಪಸು ಬರುವಾಗ ಆ ಕೋಣೆಗೆ ಬಾಗಿಲಿದ್ದುದನ್ನು ಕಂಡು ಅವನು "ಒಳ್ಳೆಯದೇ ಆಯಿತು" ಎಂದುಕೊಂಡ.

ಇಬ್ಬರೂ ಮತ್ತೆ ಜಗಲಿಗೆ ಬಂದರು. ಚಿಪ್ಪಿಗನ ಮಗ ಜೇಬಿಗೆ ಕೈಹಾಕಿ ಎರಡು ರೂಪಾಯಿಗಳನ್ನು ಹೊರಕ್ಕೆ ತೆಗೆದ. ಅವನ್ನು ಗೌಡನ ಕೈಯಲ್ಲಿಟ್ಟು "ಅಯ್ಯಾ, ನಾನು ಬೇರೆ ಜಾತಿಯವರ ಮನೆಯಲ್ಲಿ ಊಟ ಮಾಡುವುದಿಲ್ಲ. ಈ ಊರಿನಲ್ಲಿ ನಮ್ಮ ಜಾತಿಯವರು ಯಾರಾದರೂ ಇದ್ದರೆ ದಯವಿಟ್ಟು ಅವರ ಮನೆಯಲ್ಲಿ ಊಟಕ್ಕೆ ಏರ್ಪಾಡು ಮಾಡಿಬಿಡು. ಅವರೇನೂ ನನಗೆ ಸುಮ್ಮನೆ ಬಿಟ್ಟಿಯಾಗಿ ಊಟ ಹಾಕಬೇಕಾಗಿಲ್ಲ. ಅವರು ಕೇಳಿದಷ್ಟು ಹಣ ಕೊಡಲು ಸಿದ್ಧವಾಗಿದ್ದೇನೆ. ಇಗೋ, ಈ ಎರಡು ರೂಪಾಯಿ ತೆಗೆದುಕೊ. ಇನ್ನೂ ಬೇಕಾದರೆ ಕೊಡುತ್ತೇನೆ" ಎಂದ.

ಗೌಡನಿಗೆ ಬಹಳ ಆಶ್ಚರ್ಯವಾಯಿತು. ಅವನು ಕಣ್ಣುಗಳೆರಡನ್ನೂ ದೊಡ್ಡದಾಗಿ ತೆರೆದುಕೊಂಡು "ಎಲಾ! ಎಷ್ಟು ಬೇಕಾದರೂ ಕೊಡುತ್ತೇನೆ ಎನ್ನುತ್ತಾನಲ್ಲ! ಅದೂ ಆಣೆ ಕಾಸುಗಳು ಕೂಡ ಅಲ್ಲ! ಮಾತೆತ್ತಿದರೆ ರೂಪಾಯಿಗಳನ್ನೇ ಹೊರಕ್ಕೆ ತೆಗೆಯುತ್ತಾನೆ! ಇವನಿಗೆ ಇಷ್ಟೆಲ್ಲಾ ಎಲ್ಲಿಂದ ಬಂತು?" ಎಂದುಕೊಳ್ಳುತ್ತಾ, ಆ ಊರಿನಲ್ಲಿದ್ದ ಒಬ್ಬ ಬಡ ಚಿಪ್ಪಿಗನ ಮನೆಗೆ ತಾನೇ ಹೋಗಿ "ಈವೊತ್ತು ಒಬ್ಬಾತನಿಗೆ ಊಟ ಬೇಕಾಗಿದೆ. ಆತ ನಿಮ್ಮ ಜನ. ನಮ್ಮ ಮನೆಯಲ್ಲಿ ಊಟ ಮಾಡು ವುದಿಲ್ಲ. ಕನಿಷ್ಠಪಕ್ಷಕ್ಕೆ ಹುಗ್ಗಿ ಹೋಳಿಗೆಯನ್ನಾದರೂ ಮಾಡಿ ನಮ್ಮ ಮನೆಗೆ ತಂದುಕೊಡಿ. ನೀವು ಕೇಳಿದಷ್ಟು ದುಡ್ಡು ಕೊಡಿಸುತ್ತೇನೆ" ಎಂದು ಹೇಳಿಬಂದ.

ರಾತ್ರಿ ಊಟವಾಯಿತು. ಚಿಪ್ಪಿಗನ ಮಗ ಗೌಡನನ್ನು ಕುರಿತು "ಊಟ ಅಷ್ಟೇನೂ ಚೆನ್ನಾಗಿರಲಿಲ್ಲ! ಹಾಳು ಈ ಹೋಳಿಗೆ ಯಾರಯ್ಯಾ ತಿನ್ನುವವರು? ನನಗೆ ಇಂಥ ಒರಟು ಆಹಾರ ತಿಂದು ಸ್ವಲ್ಪವಾದರೂ ಅಭ್ಯಾಸವೇ ಇಲ್ಲ! ಅದು ಹೋಗಲಿ, ದುಡ್ಡು ನಾನು ಕೊಟ್ಟಷ್ಟೇ ಸಾಕಾ ಯಿತೋ ಇನ್ನೂ ಬೇಕೋ?" ಎಂದು ಕೇಳಿದ.

"ಅವನಾಗಿ ಅವನೇ ಕೊಡುತ್ತೇನೆ ಎಂದರೆ ಏಕೆ ಬಿಡಬೇಕು?" ಎಂದುಕೊಂಡು ಗೌಡ "ಇಲ್ಲ. ಈ ಊರಿನಲ್ಲಿ ಸಾಮಾನುಗಳೆಲ್ಲಾ ಬಹಳ ತುಟ್ಟಿ. ನೀನು ಇನ್ನೂ ಎರಡು ರೂಪಾಯಿ ಕೊಡಬೇಕು" ಎಂದ.

"ಅಷ್ಟೇ ತಾನೇ!" ಎನ್ನುತ್ತಾ ಚಿಪ್ಪಿಗನ ಮಗ ಜೇಬಿನಲ್ಲಿ ತಡಕಾಡಿದ. ಅಲ್ಲಿ ಒಂದು ನಾಣ್ಯವೂ ಇರಲಿಲ್ಲ. ಎಲ್ಲಾ ಖರ್ಚಾಗಿಹೋಗಿತ್ತು. ಅವನು "ಸ್ವಲ್ಪ ತಾಳು, ಹೋಗಿ ಒಂದಿಷ್ಟು ರೂಪಾಯಿ ತರುತ್ತೇನೆ. ಈಗ ಬಂದುಬಿಟ್ಟೆ!" ಎಂದು, ಒಂದು ಚೌಕವನ್ನು ಕೈಗೆ ತೆಗೆದುಕೊಂಡು, ಹಿತ್ತಲಿನಲ್ಲಿ ಕತ್ತೆಯನ್ನು ಕಟ್ಟಿದ್ದ ಕೋಣೆಗೆ ಓಡಿದ. ಗೌಡನ ಕುತೂಹಲ ಮಿತಿಮೀರಿತು. ಅವನು ಚಿಪ್ಪಿಗನ ಮಗನಿಗೆ ಕಾಣದಂತೆ ಮೆಲ್ಲಗೆ ಅವನ ಹಿಂದೆಯೇ ಹೋದ.

ಚಿಪ್ಪಿಗನ ಮಗ ಕೋಣೆಯೊಳಕ್ಕೆ ಓಡಿಹೋಗಿ ಬಾಗಿಲು ಭದ್ರಮಾಡಿ, ಕತ್ತೆಯ ಮೂತಿಯ ಕೆಳಗೆ ತಾನು ತಂದಿದ್ದ ಚೌಕವನ್ನು ಹಾಸಿ "ರೂಪಾಯಿ! ರೂಪಾಯಿ!" ಎಂದ. ರೂಪಾಯಿಗಳ ಮಳೆಯೇ ಕತ್ತೆಯ ಬಾಯಿಂದ ಸುರಿಯಿತು. ಇದನ್ನೆಲ್ಲಾ ಹೊರಗಡೆ ನಿಂತು ಬಾಗಿಲ ಕಂಡಿಯಿಂದ ಇಣಿಕಿ ನೋಡುತ್ತಿದ್ದ ಗೌಡ "ಒಳ್ಳೆಯ ದುಡ್ಡಿನ ಚೀಲವನ್ನೇ ಇಟ್ಟಿದ್ದಾನೆ ಇವನು! ಈ ಕತ್ತೆಯನ್ನು ಕದ್ದಹೊರತು ನನಗೆ ಇನ್ನು ನಿದ್ದೆಬಾರದು!" ಎಂದುಕೊಂಡು ಮೆಲ್ಲನೆ ಹಿಂತಿರುಗಿ, ಮುಂಚೆ ತಾನು ಇದ್ದ ಕಡೆಯೇ ಬಂದು ಕುಳಿತ.

ಚಿಪ್ಪಿಗನ ಮಗ ಹೊರಕ್ಕೆ ಬಂದು ಕೊಡಬೇಕಾದ ದುಡ್ಡನ್ನೆಲ್ಲಾ ಕೊಟ್ಟುಬಿಟ್ಟು ಮಲಗಿಕೊಂಡ. ರಾತ್ರಿ ಅವನಿಗೆ ಚೆನ್ನಾಗಿ ನಿದ್ದೆಹತ್ತಿತು. ಆಗ ಗೌಡ ತಮ್ಮ ಊರಿನ ಅಗಸನ ಮನೆಯಿಂದ ಒಂದು ಕತ್ತೆಯನ್ನು ತಂದು ಅದನ್ನು ಹಿತ್ತಲಿನ ಕೋಣೆಯಲ್ಲಿ ಕಟ್ಟಿ, ಚಿಪ್ಪಿಗನ ರೂಪಾಯಿ ಕೊಡುವ ಕತ್ತೆಯನ್ನು ಎಲ್ಲೋ ಮರೆಮಾಡಿದ.

ಬೆಳಗಾಗುವುದಕ್ಕೆ ಇನ್ನು ಸ್ವಲ್ಪ ಹೊತ್ತಿತ್ತು. ಆಗಲೇ ಬೇಗನೆ ಎದ್ದು ಚಿಪ್ಪಿಗನ ಮಗ "ಬಹಳ ದೂರ ಹೋಗಬೇಕು, ನಿಧಾನಿಸಿದರೆ ಆಗುವುದಿಲ್ಲ" ಎಂದು ಗೌಡನಿಗೆ ಹೇಳಿ, ಮನೆಯ ಹಿಂದುಗಡೆಗೆ ತಾನೇ ಹೋಗಿ ಅಲ್ಲಿ

ಕೋಣೆಯಲ್ಲಿ ಕಟ್ಟಿದ್ದ ಕತ್ತೆಯ ಹಗ್ಗವನ್ನು ಕೈಗೆ ತೆಗೆದುಕೊಂಡು ಅದರೊಡನೆ ಹೊರಟುಬಿಟ್ಟ. ಗೌಡನಿಗೆ ಬೇಕಾಗಿದ್ದುದು ಅಷ್ಟೇ.

ಚಿಪ್ಪಿಗನ ಮಗ ಊರು ಸೇರುವ ಹೊತ್ತಿಗೆ ಸೂರ್ಯ ಆಗಲೇ ನೆತ್ತಿಯ ಮೇಲಿದ್ದ. ಎರಡನೆಯ ಮಗನು ಮನೆಗೆ ಬಂದುದು ಮುದುಕನಿಗೆ ಬಹಳ ಸಂತೋಷವಾಯಿತು. ಆದರೂ ಅವನು ಹಿರಿಯ ಮಗನನ್ನು ಕೇಳಿದ್ದಂತೆಯೇ "ಇಷ್ಟು ದಿನ ತಿರುಗಾಡಿಕೊಂಡು ಹೋಗಿದ್ದೆಯಲ್ಲಾ, ಏನು ತಂದಿರುವೆ?" ಎಂದ.

ಮಗ "ಏನೂ ಇಲ್ಲ. ಇಗೋ, ಈ ಕತ್ತೆಯನ್ನು ತಂದಿದ್ದೇನೆ" ಎಂದ.

ಮುದುಕ ತಿರಸ್ಕಾರದಿಂದ "ಅಷ್ಟೇನೆ" ಈಗೇನು ಈ ಊರಿನಲ್ಲೇ ಬೇಕಾದಷ್ಟು ಕತ್ತೆಗಳಿವೆ. ಇದಕ್ಕೆ ಬದಲು ಒಂದು ಮೇಕೆಯನ್ನಾದರೂ ತಂದಿದ್ದರೆ ಚೆನ್ನಾಗಿತ್ತು" ಎಂದ.

ಮಗ "ಇದು ಸಾಮಾನ್ಯವಾದ ಕತ್ತೆ ಎಂದು ತಿಳಿದುಕೊಳ್ಳಬೇಡ. 'ರೂಪಾಯಿ! ರೂಪಾಯಿ!' ಎಂದರೆ ಇದರ ಬಾಯಿಂದ ರೂಪಾಯಿಗಳ ಪ್ರವಾಹವೇ ಸುರಿಯುತ್ತೆ. ನಿನ್ನ ಸ್ನೇಹಿತರನ್ನೆಲ್ಲಾ ಕರೆಸು. ಒಂದು ಕ್ಷಣದಲ್ಲಿ ಅವರೆಲ್ಲಾ ಸಾಹುಕಾರರಾಗುವ ಹಾಗೆ ಮಾಡುತ್ತೇನೆ" ಎಂದ.

"ಹಾಗಾದರೆ ನೋಡೋಣ!" ಎಂದು ಮುದುಕ ಹೊರಕ್ಕೆ ಓಡಿಹೋಗಿ ತನ್ನ ಜೊತೆಗಾರರನ್ನೆಲ್ಲಾ ಕೂಗಿದ.

ಅವರೆಲ್ಲರೂ ಬಂದು ಸೇರಿದ ಕೂಡಲೇ ಚಿಪ್ಪಿಗನ ಎರಡನೆಯ ಮಗ ನೆಲದ ಮೇಲೆ ಒಂದು ಬಟ್ಟೆ ಹಾಸಿ, ಕತ್ತೆಯನ್ನು ಅಲ್ಲಿಗೆ ಹಿಡಿದು ತಂದು, ಅದರ ಮುಂದೆ ನಿಂತು, "ರೂಪಾಯಿ! ರೂಪಾಯಿ!" ಎಂದ. ಕತ್ತೆಯ ಬಾಯಿಂದ ಜೊಲ್ಲು ಕೂಡ ಕೆಳಕ್ಕೆ ಬೀಳಲಿಲ್ಲ.

ತಾನು ಮೋಸಹೋಗಿದ್ದ ವಿಷಯ ಕೂಡಲೆ ಅವನ ಮನಸ್ಸಿಗೆ ಹೊಳೆಯಿತು. ಅವನು ಅಲ್ಲಿಗೆ ಬಂದಿದ್ದವರನ್ನೆಲ್ಲಾ ಕ್ಷಮಾಪಣೆ ಬೇಡಿದ. ಪಾಪ, ರೂಪಾಯಿ ಕಟ್ಟಿಕೊಂಡು ಹೋಗಿ ಹಣವಂತರಾಗಬೇಕು ಎಂದು ದೊಡ್ಡದೊಡ್ಡ ಚೀಲಗಳನ್ನೇ ತಂದಿದ್ದ ಅವರು ಬಂದಾಗ ಎಷ್ಟು ಬಡವರಾಗಿದ್ದರೋ ಅಷ್ಟೇ ಬಡವರಾಗಿ ಎದ್ದುಹೋಗಬೇಕಾಯಿತು. ಸರಿ—ಮುದುಕ

ಮತ್ತೆ ಸೂಜಿ ದಾರಗಳನ್ನು ಕೈಗೆ ತೆಗೆದುಕೊಂಡ. ಅವನ ಎರಡನೆಯ ಮಗನೂ ಮತ್ತೆ ಕೆಲಸ ಹುಡುಕಿಕೊಂಡು ಹೋಗಬೇಕಾಯಿತು.

ಇಷ್ಟರಲ್ಲಿ ಚಿಪ್ಪಿಗನ ಮೂರನೆಯ ಮಗ ಒಬ್ಬ ಬಡಗಿಯ ಹತ್ತಿರ ಕೆಲಸಕ್ಕೆ ಸೇರಿ, ಒಪ್ಪಿಕೊಂಡಿದ್ದಷ್ಟು ದಿನ ಕೆಲಸ ಮಾಡಿ ಮುಗಿಸಿ, ಯಜಮಾನನ ಮೆಚ್ಚುಗೆಯನ್ನು ಸಂಪಾದಿಸಿದ್ದ. ಅವನು ಅಲ್ಲಿದ್ದಾಗಲೇ ಅವನ ಅಣ್ಣಂದಿರಿಬ್ಬರೂ ಆ ಹಳ್ಳಿಯ ಗೌಡ ಹೇಗೆ ತಮ್ಮಿಬ್ಬರಿಗೂ ಮೋಸ ಮಾಡಿದ್ದನೆಂಬ ಸಂಗತಿಯನ್ನು ತಿಳಿಸಿದ್ದರು.

ಅವನ ಕೆಲಸದ ಅವಧಿ ಮುಗಿದಾಗ ಬಡಗಿ ಅವನಿಗೆ ಬಾಯಿ ಕಟ್ಟಿದ್ದ ಒಂದು ಸಣ್ಣ ಗೋಣಿಯ ಚೀಲವನ್ನು ಕೊಟ್ಟು "ಇದರಲ್ಲಿ ಒಂದು ದೊಣ್ಣೆಯಿದೆ, ತೆಗೆದುಕೊ" ಎಂದು ಹೇಳಿದ.

ಚಿಪ್ಪಿಗನ ಮಗ "ಚೀಲವೇನೋ ಏತಕ್ಕಾದರೂ ಉಪಯೋಗವಾಗುತ್ತೆ. ದೊಣ್ಣೆ ತೆಗೆದುಕೊಂಡು ನಾನೇನು ಮಾಡಲಿ?" ಎಂದ.

ಬಡಗಿ "ಹೇಳುತ್ತೇನೆ ಕೇಳ್ಳು. ನಿನಗೆ ಯಾರಾದರೂ ಅಪಾಯ ಉಂಟುಮಾಡಬೇಕೆಂದು ಪ್ರಯತ್ನಿಸಿದರೆ, ನೀನು 'ದೊಣ್ಣೆಯೆ, ಹೊರಗೆ ಬಾ' ಎಂದರೆ ಸಾಕು—ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ದೊಣ್ಣೆ ಹೊರಕ್ಕೆ ನೆಗೆದು ನಿನಗೆ ಕೆಡುಕು ಮಾಡಬೇಕೆಂದಿರುವವರ ಬೆನ್ನಿನ ಮೇಲೆ 'ಧಪ! ಧಪ! ಧಪ! ಧಪ!' ಎಂದು ಕುಣಿಯುತ್ತದೆ. ಆಮೇಲೆ ತಿಂಗಳು ಗಟ್ಟಳೆ ಆದರೂ ಅವರು ಮೈಕೈ ಅಲ್ಲಾಡಿಸುವುದಕ್ಕೆ ಆಗುವುದಿಲ್ಲ. ನೀನು ಮತ್ತೆ 'ದೊಣ್ಣೆಯೆ, ಚೀಲದೊಳಕ್ಕೆ ಹಿಂತಿರುಗಿ ಹೋಗು' ಎನ್ನುವವರೆಗೂ ಅದು ಕುಣಿತ ನಿಲ್ಲಿಸುವುದಿಲ್ಲ" ಎಂದು ಅದರ ಮಹಿಮೆಯನ್ನು ವರ್ಣಿಸಿದ.

ಚಿಪ್ಪಿಗನ ಮಗನಿಗೆ ಬಹಳ ಸಂತೋಷವಾಯಿತು. ಅವನು ಬಡಗಿಯನ್ನು ವಂದಿಸಿ ಚೀಲವನ್ನು ಕೈಗೆ ತೆಗೆದುಕೊಂಡುಹೊರಟ, ಯಾರಾದರೂ ಅವನ ತಂಟೆಗೆ ಬಂದರೆ ಆಯಿತು ಅವನ ಗತಿ! "ದೊಣ್ಣೆಯೆ, ಚೀಲದಿಂದ ಹೊರಕ್ಕೆ ಬಾ" ಎನ್ನುತ್ತಿದ್ದ. ಅವನು ಹಾಗೆನ್ನುವುದೇ ತಡ, ದೊಣ್ಣೆ ಹೊರಕ್ಕೆ ನೆಗೆದು, ಅವರ ಬೆನ್ನಿನ ಮೇಲೆ ಎಲುಬೆಲ್ಲಾ ಪುಡಿಪುಡಿಯಾಗುತ್ತದೆಯೇನೋ ಎನ್ನುವ ಹಾಗೆ ಕುಣಿಯುತ್ತಿತ್ತು! ಅವನು ಪುನಃ "ದೊಣ್ಣೆಯೆ, ಚೀಲದೊಳಕ್ಕೆ ಹಿಂದಿರುಗು" ಎಂದ ಕೂಡಲೆ ಅದು ಮಟ್ಟ

ಮಾಯವಾಗಿಬಿಡುತ್ತಿತ್ತು! ಎಲ್ಲಿಂದ ಬಂತು, ಎಲ್ಲಿಗೆ ಹೋಯಿತು ಎಂದು ಕೂಡ ಯಾರಿಗೂ ಗೊತ್ತಾಗುತ್ತಿರಲಿಲ್ಲ.

ಹಾಗೆಯೇ ತಿರುಗಾಡುತ್ತಾ ಒಂದು ದಿನ ಸಂಜೆಯ ಹೊತ್ತಿಗೆ ಅವನು ಹಿಂದೆ ತನ್ನ ಅಣ್ಣಂದಿರು ಬಂದು ಇಳಿದಿದ್ದ ಹಳ್ಳಿಗೆ ಬಂದ. ಯಾರು ಬಂದರೂ ಮೊದಲು ಊರು ಬಾಗಿಲಲ್ಲೇ ಇದ್ದ ಗೌಡನ ದೊಡ್ಡ ಮನೆಯ ಮುಂದೆಯೇ ಹೋಗಬೇಕಾಗಿತ್ತು. ಇವನೂ ಸಹ ಹಿಂದಿನವರಂತೆಯೇ ಗೌಡನ ಮನೆಗೆ ಹೋಗಿ ಗೌಡನನ್ನು ಕೂಗಿ, ರಾತ್ರಿ ಇಳಿದುಕೊಳ್ಳು ವುದಕ್ಕೆ ಎಲ್ಲಾದರೂ ಸ್ಥಳ ಒದಗಿಸಿಕೊಡಬೇಕೆಂದು ಕೇಳಿದ. ಗೌಡ "ಇನ್ನೆಲ್ಲಿಗೆ ಹೋಗುತ್ತೀಯ! ಇಲ್ಲೇ ಬೇಕಾದ ಹಾಗೆ ಜಗಲಿ ಇದೆ. ಮಲಗಿಕೊ, ಬಾ" ಎಂದ. ಇಬ್ಬರಿಗೂ ಸ್ವಲ್ಪಹೊತ್ತು ಆ ಮಾತು ಈ ಮಾತು ಬೆಳೆಯಿತು. ಚಿಪ್ಪಿಗನ ಮಗ ತಾನು ಪ್ರಪಂಚದಲ್ಲಿ ಕಂಡಿದ್ದುದ ನ್ನೆಲ್ಲಾ ಗೌಡನಿಗೆ ವರ್ಣಿಸಿದ.

ಗೌಡ "ಅದೆಲ್ಲಾ ಸರಿಯೆ! ಆದರೆ, ಬೇಕು ಬೇಕಾದಾಗಲೆಲ್ಲಾ ಊಟ ಕೊಡುವ ತಟ್ಟೆಯನ್ನೂ ರೂಪಾಯಿ ಕೊಡುವ ಕತ್ತೆಯನ್ನೂ ನೀನು ನೋಡಿರುವಂತೆ ಕಾಣುವುದಿಲ್ಲ!" ಎಂದ.

ಚಿಪ್ಪಿಗ "ಓಹೋ! ಅವೆಲ್ಲಾ ಏನು ಮಹತ್ವದ ಪದಾರ್ಥಗಳು? ಈ ಚೀಲದಲ್ಲಿ ನಾನು ಒಯ್ಯುತ್ತಿರುವ ವಸ್ತುವಿಗೆ ಅವು ಹೇಗೆ ಸರಿಯಾದಾವು?" ಎಂದು ತನ್ನ ಚೀಲದ ಕಡೆ ಕೈತೋರಿಸಿದ.

ಗೌಡನಿಗೆ ಆಗಲೇ ಕಿವಿ ನಿಮಿರಿತು, ಕಣ್ಣು ಅರಳಿತು. ಅವನು "ಇದರಲ್ಲಿ ಏನಿರಬಹುದು? ಖಂಡಿತ ಏನೋ ಬೆಲೆ ಬಾಳುವ ಪದಾರ್ಥವೇ ಇರಬೇಕು. ಏನಾದರೂ ಮಾಡಿ ನಾನು ಇದನ್ನು ಅಪಹರಿಸಲೇ ಬೇಕು!" ಎಂದುಕೊಂಡ.

ರಾತ್ರಿ ಚಿಪ್ಪಿಗನ ಮಗ ದೊಣ್ಣೆಯಿದ್ದ ಚೀಲವನ್ನು ತಲೆಯ ಕೆಳಗೆ ಇಟ್ಟುಕೊಂಡು ಮಲಗಿದ. ಬಹಳ ಹೊತ್ತು ಅವನಿಗೆ ಎಚ್ಚರಿಕೆಯಾಗಿಯೇ ಇತ್ತು. ಆದರೂ ಅವನು ಗಾಢವಾದ ನಿದ್ದೆ ಬಂದಿರುವವನಂತೆ ನಟಿಸುತ್ತಾ ಕಣ್ಣು ಮುಚ್ಚಿಕೊಂಡಿದ್ದ.

ಅವನು ಮಲಗಿ ಒಂದು ಕಾಲು ಗಂಟೆ ಕಳೆದ ಕೂಡಲೇ, ಗೌಡ ಅಲ್ಲಿಗೆ ಸದ್ದು ಮಾಡದೆ ಕದ್ದು ಬಂದು ಮೆಲ್ಲಗೆ ಚೀಲ ಎಳೆದ. ಅದನ್ನು ತೆಗೆದುಕೊಂಡು ಅದರ ಬದಲು ಚಿಪ್ಪಿಗನ ಮಗನ ತಲೆಯ ಕೆಳಗೆ ಬೇರೆ ಒಂದು ಚೀಲ ಇಡಬೇಕೆಂಬುದೇ ಅವನ ಉದ್ದೇಶ. ಆದರೆ ಚಿಪ್ಪಿಗನಿಗೆ ನಿದ್ದೆ ಬಂದಿರಲಿಲ್ಲ. ಅವನೂ ಗೌಡ ಬರುವುದನ್ನೇ ಕಾಯುತ್ತಿದ್ದ. ಗೌಡ ಒಂದು ಸಾರಿ ಚೀಲ ಎಳೆದನೋ ಇಲ್ಲವೋ ಚಿಪ್ಪಿಗನ ಮಗ "ದೊಣ್ಣೆಯೆ, ಚೀಲದಿಂದ ಹೊರಕ್ಕೆ ಬಾ" ಎಂದ.

ತಕ್ಷಣವೇ ದೊಣ್ಣೆ ಹೊರಕ್ಕೆ ಹಾರಿ ಗೌಡನ ಬೆನ್ನಿನ ಮೇಲೆ "ಥಪ್! ಥಪ್!" ಎಂದು ಕುಣಿಯಲು ಆರಂಭಿಸಿತು.

ಗೌಡನಿಗೆ ಮೈಯೆಲ್ಲಾ ಜಜ್ಜಿ ಹೋಗುವುದೇನೋ ಎನ್ನುವಹಾಗಾಯಿತು. ಅವನ ಕಣ್ಣುಗಳಲ್ಲಿ ನೀರು ಕಿತ್ತುಕೊಂಡಿತು. ಅವನು "ನಿಲ್ಲಿಸಪ್ಪ! ದಮ್ಮಯ್ಯ, ನಿಲ್ಲಿಸಪ್ಪ! ಕೈಮುಗಿಯುತ್ತೇನೆ, ನಿಲ್ಲಿಸಪ್ಪ!'' ಎಂದು ಗಟ್ಟಿಯಾಗಿ ಬೇಡಿಕೊಂಡ. ಅವನು ಬೇಡಿಕೊಂಡಷ್ಟೂ ದೊಣ್ಣೆಯ ಕುಣಿತ ಜೋರಾಯಿತು. ಕೊನೆಗೆ ತಡೆಯಲಾರದೆ ಗೌಡ ನೆಲದ ಮೇಲೆ ಬಿದ್ದುಬಿಟ್ಟ.

ಆಗ ಚಿಪ್ಪಿಗನ ಮಗ "ನೀನು ನನ್ನ ಅಣ್ಣಂದಿರ ಹತ್ತಿರದಿಂದ ಕದ್ದು ಮುಚ್ಚಿಟ್ಟುಕೊಂಡಿರುವ ತಟ್ಟೆಯನ್ನೂ ಕತ್ತೆಯನ್ನೂ ಹಿಂದಿರುಗಿ ಕೊಡದಿದ್ದರೆ ದೊಣ್ಣೆಯ ಕುಣಿತ ಮತ್ತೆ ಆರಂಭವಾಗುತ್ತದೆ'' ಎಂದ.

ಗೌಡ ನಡುಗುತ್ತ "ಬೇಡಪ್ಪ, ಕೈಮುಗಿಯುತ್ತೇನೆ, ಬೇಡ. ಖಂಡಿತವಾಗಿಯೂ ಅವನ್ನು ಹಿಂದಕ್ಕೆ ಕೊಟ್ಟುಬಿಡುತ್ತೇನೆ'' ಎಂದ. ದೊಣ್ಣೆ ಚೀಲದೊಳಕ್ಕೆ ವಾಪಸು ಹೋಯಿತು.

ರಾತ್ರಿ ಕಳೆದು ಬೆಳಗಾಯಿತು. ಚಿಪ್ಪಿಗನ ಮಗ ಕೇಳಿದಾಗ ಊಟ ಕೊಡುವ ತಟ್ಟೆಯನ್ನೂ ರೂಪಾಯಿ ಕೊಡುವ ಕತ್ತೆಯನ್ನೂ ದೊಣ್ಣೆಯಿದ್ದ ತನ್ನ ಚೀಲವನ್ನೂ ತೆಗೆದುಕೊಂಡು ಊರಕಡೆ ಹೊರಟ. ಅವರ ಅಪ್ಪ ಮಗನನ್ನು ನೋಡಿದ ಕೂಡಲೆ ಸಂತೋಷದಿಂದ ಉಬ್ಬಿದ.

ಆದರೆ ಆ ಮುದುಕ ಇವನನ್ನೂ ಬಿಡಲಿಲ್ಲ. "ಇಷ್ಟು ದಿನ ತಿರುಗಾಡಿಕೊಂಡು ಬಂದೆಯಲ್ಲ, ಏನು ತಂದಿರುವೆ?'' ಎಂದ.

ಮಗ "ಒಂದು ದೊಣ್ಣೆ ತಂದಿದ್ದೇನೆ. ಅದು ಈ ಚೀಲದ ಒಳಗಿದೆ. ಬಹಳ ಉಪಯೋಗಕ್ಕೆ ಬರುವ ದೊಣ್ಣೆ'' ಎಂದ.

ಮುದುಕನಿಗೆ ಆಶ್ಚರ್ಯವಾಯಿತು. ಅವನು "ಏನು, ದೊಣ್ಣೆಯೆ? ಒಂದು ದೊಣ್ಣೆ ತರುವುದಕ್ಕಾಗಿ ಇಷ್ಟು ದಿವಸ ಸೀಮೆಯ ಮೇಲೆಲ್ಲಾ ಅಲೆದುಕೊಂಡು ಹೋಗಿದ್ದೆಯಾ? ಈ ಊರಿನಲ್ಲೇ ಒಂದೊಂದು ಮರಕ್ಕೆ ಇಪ್ಪತ್ತು ದೊಣ್ಣೆ ದೊರೆಯುತ್ತ ಇತ್ತಲ್ಲಯ್ಯಾ!" ಎಂದು ಹಾಸ್ಯ ಮಾಡಿದ.

ಮಗ "ಅದು ನಿಜ. ಎಲ್ಲಾ ಕಡೆಯೂ ದೊಣ್ಣೆಗಳೇನೋ ಬೇಕಾದ ಹಾಗೆ ಸಿಕ್ಕುತ್ತವೆ. ಆದರೆ ಇಂಥ ದೊಣ್ಣೆ ಇನ್ನೆಲ್ಲೂ ಸಿಕ್ಕುವುದಿಲ್ಲ. 'ದೊಣ್ಣೆಯೆ, ಚೀಲದಿಂದ ಹೊರಕ್ಕೆ ಬಾ'' ಎಂದು ನಾನು ಹೇಳಿದರೆ ಸಾಕು, ಅದು ಕೂಡಲೆ ಹೊರಕ್ಕೆ ಹಾರಿ ಬಂದು, ನನಗೆ ಯಾರು ಕೆಡುಕು ಮಾಡಬೇಕೆಂದಿರುತ್ತಾರೋ ಅವರ ಬೆನ್ನಿನ ಮೇಲೆ 'ಥಕಥೈ! ಥಕಥೈ!' ಎಂದು ಕುಣಿತ ಮಾಡುತ್ತದೆ. ಅವನು ಸೋತು ನೆಲಕ್ಕೆ ಬಿದ್ದು 'ಸಾಕಪ್ಪಾ' ಎಂದು ಕೇಳಿಕೊಳ್ಳುವವರೆಗೂ ಬಿಡುವುದಿಲ್ಲ! ಏನು ಹೇಳುತ್ತೀಯ ಇದಕ್ಕೆ? ಈ ದೊಣ್ಣೆಯ ಸಹಾಯದಿಂದ ನನ್ನ ಅಣ್ಣಂದಿರು ಕಳೆದುಕೊಂಡು ಬಂದಿದ್ದ ಅದ್ಭುತವಾದ ತಟ್ಟೆಯನ್ನೂ ಕತ್ತೆಯನ್ನೂ ಮತ್ತೆ ಪಡೆದು ತಂದಿದ್ದೇನೆ. ಈಗ ಅವರಿಬ್ಬರನ್ನೂ ಬರಮಾಡು. ನಿನ್ನ ಸ್ನೇಹಿತರನ್ನೆಲ್ಲಾ ಕರೆಸು. ನಾನು ಅವರಿಗೆ ಬೇಕಾದಷ್ಟು ಊಟ ಹಾಕುತ್ತೇನೆ, ಅವರು ಕೇಳಿದಷ್ಟು ದುಡ್ಡು ಕೊಡುತ್ತೇನೆ'' ಎಂದ.

ಮುದುಕನಿಗೆ ಇವನು ಆಡಿದ ಒಂದು ಮಾತಿನಲ್ಲೂ ನಂಬಿಕೆ ಬರಲಿಲ್ಲ. ಆದರೂ "ನೋಡೋಣ" ಎಂದುಕೊಂಡು ತನ್ನ ಸ್ನೇಹಿತರನ್ನೆಲ್ಲಾ ಕರೆದ. ಮೊದಲನೆಯ ಇಬ್ಬರು ಮಕ್ಕಳೂ ಬಂದರು. ಅನಂತರ ಮೂರನೆಯ ಮಗ ಅವರೆಲ್ಲರೂ ಕೂತಿದ್ದ ಕೋಣೆಯ ನಡುವೆ ಬಂದು ಬಟ್ಟೆಯನ್ನು ಹಾಸಿ, ಹೊರಗೆ ಹೋಗಿ ಕತ್ತೆಯನ್ನು ಹಿಡಿದು ತಂದು, 'ಅಣ್ಣಾ ನಿನ್ನ ಭಂಟನನ್ನು ಮಾತಾಡಿಸು" ಎಂದ.

ಎರಡನೆಯ ಮಗ "ರೂಪಾಯಿ! ರೂಪಾಯಿ!" ಎಂದ. ಒಂದು ಕ್ಷಣದಲ್ಲಿ ಚಟ ಪಟ ಮಳೆಸುರಿದಂತೆ ರೂಪಾಯಿಗಳು ಕತ್ತೆಯ ಬಾಯಿಂದ

ಬಟ್ಟೆಯ ಮೇಲೆ ಉದುರಿದವು. ಅಲ್ಲಿ ಸೇರಿದ್ದವರೆಲ್ಲಾ "ಸಾಕು, ಇನ್ನು ಹೆಚ್ಚಾಗಿ ಹೊತ್ತುಕೊಂಡು ಹೋಗಲು ನಮ್ಮ ಕೈಯಲ್ಲಿ ಆಗುವುದಿಲ್ಲ!" ಎನ್ನುವವರೆಗೂ ರೂಪಾಯಿ ಸುರಿದವು.

ಅನಂತರ ಅವರೆಲ್ಲರೂ ಒಂದೊಂದು ಎಲೆಯನ್ನು ಮುಂದೆ ಹರಡಿಕೊಂಡು ಕುಳಿತರು. ಮೂರನೆಯ ಮಗ ತಟ್ಟೆಯನ್ನು ಒಳಕ್ಕೆ ತಂದ. ಮೊದಲನೆಯವನು "ತಟ್ಟೆಯೆ, ಊಟ ಸಿದ್ಧವಾಗಲಿ" ಎಂದ. ತಕ್ಷಣ ಅದರ ತುಂಬಾ ಬಾಯಲ್ಲಿ ನೀರೂರಿಸುವಂಥ ಆಹಾರಪದಾರ್ಥಗಳು ತುಂಬಿಕೊಂಡವು. ಚಿಪ್ಪಿಗನ ಮನೆಯಲ್ಲಿ ಅಂಥ ಊಟ ಅವರ ಅಜ್ಜನ ಕಾಲಕ್ಕೂ ಆಗಿರಲಿಲ್ಲ. ಬಂದಿದ್ದವರೆಲ್ಲಾ ಗಂಟಲವರೆಗೂ ತಿಂದು ದಾರಿಯುದ್ದಕ್ಕೂ ತೇಗುತ್ತಾ ರಾತ್ರಿ ಬಹಳ ಹೊತ್ತಾದ ಮೇಲೆ ತಮ್ಮ ತಮ್ಮ ಮನೆಗಳಿಗೆ ಹೋದರು.

ಅಂದಿನಿಂದ ಚಿಪ್ಪಿಗ ತನ್ನ ಸೂಜಿ, ದಾರ, ಅಳತೆಕಡ್ಡಿ, ಕತ್ತರಿ, ಎಲ್ಲವನ್ನೂ ಒಂದು ಗಂಟುಕಟ್ಟಿ ಮನೆಯ ಹೆಂಚಿನ ಕೆಳಗೆ ತೊಲೆಯ ಮೇಲಿದ್ದ ಸಂದಿನಲ್ಲಿ ತೂರಿಸಿಬಿಟ್ಟ. ಆಮೇಲೆ ಅವನೂ ಅವನ ಮಕ್ಕಳೂ ಬದುಕಿದ್ದಷ್ಟು ದಿನಗಳೂ ಸುಖವಾಗಿದ್ದರು.

ಇಷ್ಟಾಯಿತಲ್ಲಾ, ಇವರನ್ನೆಲ್ಲಾ ಮನೆಯಿಂದ ಓಡಿಸುವುದಕ್ಕೆ ಕಾರಣವಾಗಿದ್ದ ಆ ಕೆಟ್ಟ ಮೇಕೆ ಎಲ್ಲಿಗೆ ಹೋಯಿತು ಎಂದು ಕೇಳುವಿರಲ್ಲವೆ ನೀವು? ಚಿಪ್ಪಿಗ ಅದರ ತಲೆಯ ಮೇಲಿದ್ದ ಕೂದಲನ್ನೆಲ್ಲಾ ಕತ್ತರಿಸಿದ್ದನಷ್ಟೆ. ಅದು ಅವನ ಮನೆಯಿಂದ ಒಂದೇ ಸಮನೆ ಓಡಿ ಒಂದು ಕೆರೆಗೆ ಹೋಯಿತು. ಅಲ್ಲಿ ನೀರಿನಲ್ಲಿ ತನ್ನ ತಲೆಯನ್ನು ನೋಡಿಕೊಂಡಾಗ ಅದಕ್ಕೆ ಬಹಳ ನಾಚಿಕೆಯಾಯಿತು. ಮೈಮೇಲೆಲ್ಲಾ ಚಾವಟಿ ಏಟನಿಂದ ಬಾಸುಂಡೆ ಬೇರೆ ಬಿದ್ದಿದ್ದವು. ಆದ್ದರಿಂದ ಅದು ಇನ್ನು ಪ್ರಪಂಚದಲ್ಲಿ ಯಾರಿಗೂ ಮುಖ ತೋರಿಸಬಾರದೆಂದು ಓಡಿ ಓಡಿ ಓಡಿ ಕಡೆಗೆ ಒಂದು ನರಿಯ ಬಿಲದಲ್ಲಿ ಹೋಗಿ ಸೇರಿಕೊಂಡುಬಿಟ್ಟಿತು.

ಸ್ವಲ್ಪ ಹೊತ್ತಾದ ಮೇಲೆ ನರಿ ಬಿಲಕ್ಕೆ ಬಂದು ನೋಡುತ್ತೆ—ಎರಡು ದೊಡ್ಡ ಕಣ್ಣುಗಳು ಕತ್ತಲಲ್ಲಿ ಥಳಥಳಿಸುತ್ತಿದ್ದವು. ನರಿಗೆ ಎದೆ ಗಡಗಡ ನಡುಗಿತು. ಅದು ಅಲ್ಲಿಂದ ಪರಾರಿಯಾಗಿ ಕಾಡಿನಲ್ಲಿ ದಿಕ್ಕಾಪಾಲಾಗಿ

ಓಡಿತು. ಎದುರಿಗೆ ಬಂದ ಒಂದು ಕರಡಿ "ನರಿ, ಏಕೆ ಹೀಗೆ ಓಡು ತ್ತಿರುವೆ?" ಎಂದು ಕೇಳಿತು. ನರಿ "ಹೋ! ಏನು ಹೇಳಲಿ, ಕರಡಿ? 'ನನ್ನ ಬಿಲದಲ್ಲಿ ಯಾವುದೋ ಭಯಂಕರವಾದ ಪ್ರಾಣಿ ಬಂದು ಸೇರಿಕೊಂಡು ಬಿಟ್ಟದೆ! ನಾನು ಅಲ್ಲಿಗೆ ಹೋದ ಕೂಡಲೆ ಕೆಂಡದಂಥ ಕಣ್ಣುಗಳಿಂದ ನನ್ನನ್ನೇ ದುರುಗುಟ್ಟಿಕೊಂಡು ನೋಡಿತು! ಹೆದರಿಕೆಯಾಗಿ ಓಡಿಬಂದು ಬಿಟ್ಟೆ! ಎದೆಯ ನಡುಕ ಇನ್ನೂ ನಿಂತಿಲ್ಲ! ಅಬ್ಬಬ್ಬ!" ಎಂದಿತು.

"ಇದಕ್ಕೇಕೆ ಇಷ್ಟು ಹೆದರಿಕೆ? ನಾನು ಅದನ್ನು ಓಡಿಸುತ್ತೇನೆ, ಬಾ" ಎಂದು ಕರಡಿ ನರಿಯ ಬಿಲಕ್ಕೆ ಬಂತು. ಒಳಗಿದ್ದ ಮೇಕೆಯ ಕಣ್ಣು ಗಳನ್ನು ನೋಡಿತೋ ಇಲ್ಲವೋ, ಅದರ ಜಂಬವೆಲ್ಲಾ ಎಲ್ಲೋ ಅಣಗಿ ಹೋಗಿ ಕರಡಿ ಕೂಡ ಪಲಾಯನ ಮಾಡಿತು.

ದಾರಿಯಲ್ಲಿ ಒಂದು ಜೇನುನೊಣ ಬರುತ್ತಿತ್ತು. ಅದು ಕರಡಿ ಯನ್ನು ಕಂಡು "ಕರಡಿ, ಏಕೆ ಇಷ್ಟು ಪೆಚ್ಚಾಗಿದ್ದೀಯಲ್ಲಾ?" ಎಂದು ಕೇಳಿತು.

ಕರಡಿ "ನರಿಯ ಬಿಲದಲ್ಲಿ ಯಾವುದೋ ರಾಕ್ಷಸಪ್ರಾಣಿ ಸೇರಿ ಕೊಂಡು, ಹೋದವರನ್ನೆಲ್ಲಾ ಬೆಂಕಿಯಂಥ ಕಣ್ಣುಗಳಿಂದ ದುರುಗುಟ್ಟಿ ಕೊಂಡು ನೋಡುತ್ತದೆ. ಅದನ್ನು ಓಡಿಸುವುದಕ್ಕೆ ಯಾರಿಂದಲೂ ಆಗುವು ದಿಲ್ಲ" ಎಂದಿತು.

ಜೇನುನೊಣ "ನಾನು ನೋಡುವುದಕ್ಕೇನೋ ಸಣ್ಣದಾಗಿದ್ದೇನೆ. ನನ್ನಂಥವರು ನಿಮ್ಮ ಕಣ್ಣಿಗೆ ಬೀಳುವುದೇ ಅಪರೂಪ. ಆದರೂ ನಾನು ನಿನಗೆ ಸಹಾಯ ಮಾಡುತ್ತೇನೆ, ಬಾ" ಎಂದಿತು.

ಹೀಗೆ ಹೇಳಿ, ಜೇನುನೊಣ ನರಿಯ ಬಿಲದ ಒಳಕ್ಕೆ ಹಾರಿಹೋಗಿ, ಕೂಡಲೇ ಇಲ್ಲದೆ ಬೋಳಾಗಿದ್ದ ಮೇಕೆಯ ನೆತ್ತಿಯ ಮೇಲೆ ಕುಳಿತು ಕೊಂಡು ಅದನ್ನು ಚೆನ್ನಾಗಿ ಕುಟುಕಿತು. ಮೇಕೆ ಪಾಪ, ಹುಚ್ಚು ಹಿಡಿದಂತೆ ಕಿರಿಚುತ್ತಾ ಓಡಿತು. ಅದು ಎಲ್ಲಿಗೆ ಹೋಯಿತು ಎಂಬ ಸಂಗತಿ ಮಾತ್ರ ಇದುವರೆಗೂ ಯಾರಿಗೂ ತಿಳಿದುಬಂದಿಲ್ಲ.

# ತೋಳ-ನರಿ

ಒಂದು ತೋಳವೂ ಒಂದು ನರಿಯೂ ಕಾಡಿನಲ್ಲಿ ಒಟ್ಟಿಗೆ ವಾಸಮಾಡಿ ಕೊಂಡಿದ್ದವು. ಒಂದು ದಿವಸ ಅವೆರಡೂ ಎಲ್ಲಿಗೋ ಹೋಗುತ್ತಿದ್ದವು. ಆ ದಿನ ಬೆಳಗಿನಿಂದಲೂ ತೋಳಕ್ಕೆ ಹೊಟ್ಟೆಗೆ ಏನೂ ಸಿಕ್ಕಿರಲಿಲ್ಲ. ಸ್ವಲ್ಪ ದೂರ ಹೋದಮೇಲೆ ತೋಳ ಇದ್ದಕ್ಕಿದ್ದ ಹಾಗೆಯೇ ನರಿಯ ಕಡೆ ತಿರುಗಿ "ನನಗೆ ಈಗ ತಿನ್ನುವುದಕ್ಕೆ ಏನಾದರೂ ತಂದು ಕೊಡುತ್ತೀಯೋ, ಇಲ್ಲ ನಿನ್ನನ್ನೇ ತಿಂದುಬಿಡಲೋ?" ಎಂದಿತು.

ನರಿಗೆ ಪೀಕಲಾಟಕ್ಕೆ ಇಟ್ಟುಕೊಂಡಿತು. ಆದರೂ ಅದು ಹೆದರಲಿಲ್ಲ. ಮೊದಲೇ ಉಪಾಯಗಾರ ಪ್ರಾಣಿ! "ಇಲ್ಲೇ ಕಾಡಿನ ಅಂಚಿನಲ್ಲಿ ಒಂದು ಸಣ್ಣ ಹಳ್ಳಿಯಿದೆ. ಆ ಹಳ್ಳಿಯ ಹೊರಭಾಗದಲ್ಲಿ ಒಂದು ಕುರಿಯ ರೊಪ್ಪ ವಿದೆ. ಅದರಲ್ಲಿ ನಿನ್ನೆ ತಾನೆ ಹುಟ್ಟಿದ ಎರಡು ಸೊಗಸಾದ ಕುರಿ ಮರಿಗಳಿವೆ. ಬಾ, ಹೋಗಿ ನೋಡೋಣ" ಎಂದಿತು.

ತೋಳಕ್ಕೆ ಬಹಳ ಸಂತೋಷವಾಯಿತು. ಎರಡೂ ಕುರಿಯ ರೊಪ್ಪಕ್ಕೆ ಹೋದವು. ಬೆಳದಿಂಗಳು ಮಬ್ಬು ಮಬ್ಬಾಗಿತ್ತು. ಜನಗಳೆಲ್ಲಾ ಮಲಗಿ ನಿದ್ದೆಮಾಡುತ್ತಿದ್ದರು. ಎಲ್ಲೂ ಸದ್ದಿರಲಿಲ್ಲ. ತೋಳ ಹೊರಗಡೆಯೇ ನಿಂತುಕೊಂಡಿತು. ನರಿ ಬೇಲಿಯ ಮೇಲಿನಿಂದ ರೊಪ್ಪಕ್ಕೆ ಹಾರಿ, ಮೆಲ್ಲನೆ ಒಂದು ಮರಿಯನ್ನು ಎತ್ತಿಕೊಂಡು ಬಂದು ತೋಳಕ್ಕೆ ಕೊಟ್ಟಿತು. ತೋಳ ಮರಿಯನ್ನು ತಿನ್ನುತ್ತಿದ್ದಾಗ ನರಿ ಮಾತಾಡದೆ ಓಡಿ ಹೋಯಿತು.

ತೋಳ ಆ ಮರಿಯನ್ನು ಗಬಗಬನೆ ನುಂಗಿಬಿಟ್ಟಿತು. ಆದರೆ ಅದಕ್ಕೆ ಅಷ್ಟರಿಂದಲೇ ತೃಪ್ತಿಯಾಗಲಿಲ್ಲ. ಹಿಂದಿನ ದಿನ ಹುಟ್ಟಿದ ಮರಿ ಅದು! ತೋಳದ ನಾಲಗೆಗೆ ರುಚಿ ಹತ್ತಿತು! ಆದ್ದರಿಂದ

ಅದು ತಾನೇ ರೊಪ್ಪಕ್ಕೆ ಹಾರಿ ಇನ್ನೊಂದು ಮರಿಯನ್ನೂ ಹಿಡಿದು ಎಳೆಯಿತು. ಆದರೆ ನರಿಗೆ ಇದ್ದಷ್ಟು ಬುದ್ಧಿ ತೋಳಕ್ಕೆ ಎಲ್ಲಿಂದ ಬರಬೇಕು? ಅದು ಮರಿಯನ್ನು ಎಳೆದಾಗ ರೊಪ್ಪದಲ್ಲೆಲ್ಲಾ ಸದ್ದಾಯಿತು. ಮರಿಯ ತಾಯಿ ಎದ್ದು ನೋಡಿ ಊರಿಗೆಲ್ಲಾ ಕೇಳುವ ಹಾಗೆ ಕಿರಿಚಿಕೊಂಡಿತು.

ಇದರ ಅಬ್ಬರವನ್ನು ಕೇಳಿ ಹಳ್ಳಿಯ ಕೆಲವು ರೈತರು ಏನಾಯಿತೋ ನೋಡೋಣವೆಂದು ಓಡಿ ಓಡಿ ಬಂದರು. ರೊಪ್ಪದಲ್ಲಿ ತೋಳ ಕಾಣಿಸಿತು. ಅವರಿಗೆ ನಿದ್ದೆ ಕೆಟ್ಟಿದ್ದುದರಿಂದ ಮೊದಲೇ ರೇಗಿತ್ತು. ಆ ಕೋಪವನ್ನೆಲ್ಲಾ ತೋಳದ ಮೇಲೆ ತೀರಿಸಿದರು. ಕೈಗೆ ಸಿಕ್ಕಿದ ಕಟ್ಟಿಗೆಗಳನ್ನು ತೆಗೆದುಕೊಂಡು ಒಬ್ಬೊಬ್ಬರು ಹತ್ತು ಏಟು ಹೊಡೆದರು. ತೋಳ ಕಿರಿಚಿಕೊಂಡು ಕುಂಟುತ್ತಾ ನರಿ ಇದ್ದ ಕಡೆಗೆ ಓಡಿಹೋಯಿತು.

ನರಿಯನ್ನು ನೋಡಿ ತೋಳ "ಒಳ್ಳೆಯ ಸ್ಥಳಕ್ಕೇ ಕರೆದುಕೊಂಡು ಹೋದೆ! ಅಲ್ಲಿಂದ ಇನ್ನೊಂದು ಮರಿಯನ್ನು ತರೋಣವೆಂದು ನಾನು ಹೋದಾಗ ರೈತರು ಬಂದು ಮೈಯೆಲ್ಲಾ ಜಜ್ಜಿಹೋಗುವ ಹಾಗೆ ಹೊಡೆದರು" ಎಂದಿತು.

ನರಿ "ನಾನೇನು ಮಾಡಲಯ್ಯಾ? ನೀನೇಕೆ ಹಾಗೆ ಹೊಟ್ಟೆಬಾಕನಾಗಿದ್ದೀಯೆ?" ಎಂದಿತು.

ಮಾರನೆಯ ದಿನ ಮತ್ತೆ ನರಿಯೂ ತೋಳವೂ ಹೊಲಗಳ ಮೇಲೆ ಹೋಗುತ್ತಿದ್ದವು. ಇದ್ದಕ್ಕಿದ್ದಹಾಗೆಯೇ ತೋಳ ನರಿಯ ಕಡೆಗೆ ತಿರುಗಿ "ಈಗ ನನಗೆ ತಿನ್ನುವುದಕ್ಕೆ ಏನಾದರೂ ತಂದು ಕೊಡು. ಇಲ್ಲದಿದ್ದರೆ ನಿನ್ನನ್ನೇ ತಿಂದು ಬಿಡುತ್ತೇನೆ!" ಎಂದಿತು.

ನರಿ "ಅಲ್ಲೊಂದು ಮನೆ ಇದೆ. ಅಲ್ಲಿ ಸಾಯಂಕಾಲ ಬಿಸಿಬಿಸಿ ರೊಟ್ಟಿಗಳನ್ನು ಸುಡುತ್ತಿದ್ದರು. ಹೋಗಿ ನೋಡೋಣ, ಬಾ" ಎಂದಿತು.

ತೋಳಕ್ಕೆ ಬಹಳ ಸಂತೋಷವಾಯಿತು. ಎರಡೂ ನರಿ ಹೇಳಿದ ಮನೆಗೆ ಹೋದವು.

ಮನೆಯವರೆಲ್ಲಾ ರಾತ್ರಿ ಊಟ ಮಾಡಿ ಮುಂದುಗಡೆ ಅಂಗಳ ಮಾತಾಡುತ್ತಾ ಕೂತಿದ್ದರು. ನರಿಯೂ ತೋಳವೂ ಹಿತ್ತಲ ಕಡೆಯಿ ಗಲಭೆ ಮಾಡದೆ ನುಗ್ಗಿದವು. ತೋಳ ಹಿತ್ತಲಲ್ಲೇ ನಿಂತುಕೊಂಡಿ ನರಿ ಬಾಗಿಲ ಸಂದಿಯಿಂದ ಮೆಲ್ಲಗೆ ಒಳಗೆ ಹೋಗಿ ಅಡುಗೆ ಮನೆಯನ್ನೆ ತಡಕಾಡಿತು. ಬೆಳಗ್ಗೆ ತಂಗಳೂಟಕ್ಕೆಂದು ಎಂಟು-ಹತ್ತು ರೊಟ್ಟಿಗಳ ಒಂದು ಗಡಿಗೆಯಲ್ಲಿಟ್ಟಿದ್ದರು. ಅದರಲ್ಲಿ ಆರು ರೊಟ್ಟಿಗಳನ್ನು ಬಾಂ ಕಚ್ಚಿಕೊಂಡು ಹೋಗಿ ನರಿ ತೋಳಕ್ಕೆ ಕೊಟ್ಟಿತು. ತೋಳ ರೊಟ್ಟಿಗಳ ತಿನ್ನುತ್ತಿದ್ದಾಗ ನರಿ ಪರಾರಿಯಾಯಿತು.

ಅಷ್ಟು ರೊಟ್ಟಿಗಳನ್ನೂ ತೋಳ ಒಂದೆರಡು ನಿಮಿಷಗಳಲ್ಲೇ ನು ಬಿಟ್ಟಿತು. ಆದರೂ ಅದಕ್ಕೆ ತೃಪ್ತಿಯಾಗಲಿಲ್ಲ. ಇನ್ನೂ ಒಂದೆ ರೊಟ್ಟಿಗಳನ್ನಾದರೂ ತಿನ್ನಬೇಕು ಎನ್ನಿಸಿತು. ಆದ್ದರಿಂದ ಅ ತಾನೇ ಒಳಕ್ಕೆ ನುಗ್ಗಿ ಹುಡುಕಾಡಿ ರೊಟ್ಟಿಗಳಿದ್ದ ಗಡಿಗೆಯ ಈಚೆಗೆ ಎಳೆಯಿತು. ಅವಸರದಲ್ಲಿ ಗಡಿಗೆ ನೆಲಕ್ಕೆ ಬಿದ್ದು ಚೂ ಚೂರಾಯಿತು.

ಗಡಿಗೆ ಬಿದ್ದ ಸದ್ದು ಕೇಳಿ ಹೊರಗಡೆ ಕುಳಿತಿದ್ದವರು ಎದ್ದು ಬಂ ನೋಡಿದರು. ತೋಳವನ್ನು ಕಂಡ ಕೂಡಲೆ ಅವರಿಗೆ ಮೈಯೆಲ್ಲಾ ಬೆ ಯಾಯಿತು. ಮನೆಯಲ್ಲಿದ್ದ ದೊಣ್ಣೆಗಳನ್ನೆಲ್ಲಾ ತಂದು ಅದನ್ನು ಚೆನ್ನಾ ಚಚ್ಚಿದರು. ಪಾಪ, ತೋಳ ಈಸಾರಿ ಎರಡು ಕಾಲುಗಳಿಂದೇ ಕುಂಟುತ್ತಾ ನರಿ ಇದ್ದ ಸ್ಥಳಕ್ಕೆ ಓಡಿತು.

ನರಿಯನ್ನು ನೋಡಿ ತೋಳ "ಥೂ! ನಿನ್ನ ಮನೆ ಹಾಳಾಗ ಎಂಥಾ ಕಡೆಗೆ ಕರೆದುಕೊಂಡು ಹೋದೆ! ಆ ಮನೆಯವರು ನನ್ನ ಚವ ಸುಲಿದುಬಿಟ್ಟರು" ಎಂದಿತು.

ನರಿ "ನೀನೇಕೆ ಹಾಗೆ ಹೊಟ್ಟೆಬಾಕನಾಗಿರಬೇಕು?" ಎಂದಿತು.

ಮೂರನೆಯ ದಿನ ಅವು ಮತ್ತೆ ಕಾಡಿನಲ್ಲಿ ಅಲೆದಾಡಲು ಹೋದಃ ತೋಳ ಇನ್ನೂ ಕುಂಟುತ್ತಲೇ ಇತ್ತು. ಹಿಂದಿನ ದಿನ ತಿಂದ ಏಟಿನಿಂ ಪಾಪ, ಇನ್ನೂ ಉಬ್ಬಸಪಡುತ್ತಿತ್ತು. ಆದರೂ ಅದರ ಜೋರು ಮಾ ಕಡಿಮೆಯಾಗಿರಲಿಲ್ಲ. ಅದು ಇದ್ದಕ್ಕಿದ್ದಂತೆಯೇ ನರಿಯ ಕಡೆ ತಿರು

"ಈಗ ನನಗೆ ತಿನ್ನುವುದಕ್ಕೆ ಏನಾದರೂ ತಂದುಕೊಡು, ಇಲ್ಲದಿದ್ದರೆ ನಿನ್ನನ್ನೇ ತಿಂದುಬಿಡುತ್ತೇನೆ!" ಎಂದಿತು.

ನರಿಗೆ ಮತ್ತೆ ಯೋಚನೆ ಹತ್ತಿತು. ಅದು ಅಲ್ಲೊಂದು ಮನೆ ಇದೆ. ಅಲ್ಲಿ ನಿನ್ನೆ ತಾನೇ ಹತ್ತಾರು ಕೋಳಿಗಳು ಮೊಟ್ಟೆ ಹಾಕಿವೆ. ಬಾ, ನೋಡೋಣ" ಎಂದಿತು.

ತೋಳ "ನೀನು ಸಹಾಯ ಮಾಡುವ ಹಾಗಿದ್ದರೆ ಬರುತ್ತೇನೆ" ಎಂದಿತು.

ನರಿ "ಅಗತ್ಯವಾಗಿ ಮಾಡುತ್ತೇನೆ, ಬಾ" ಎಂದಿತು.

ಎರಡೂ ಆ ಮನೆಗೆ ಹೋದವು. ಎಲ್ಲರೂ ಆಗಲೇ ಮಲಗಿದ್ದರು. ಬಾಗಿಲುಗಳನ್ನೆಲ್ಲಾ ಹಾಕಿಬಿಟ್ಟಿದ್ದರು. ಹಿತ್ತಲ ಕಡೆ ಗಾಳಿ ಬರುವುದಕ್ಕೆಂದು ಮಾಡಿದ ಒಂದು ಸಣ್ಣ ಗುಂಡನೆಯ ತೂತು ಗೋಡೆಯಲ್ಲಿತ್ತು. ಅದರ ಮೂಲಕ ಹೇಗೋ ಪ್ರಯತ್ನಪಟ್ಟು ಎರಡೂ ಒಳಕ್ಕೆ ಧುಮಿಕಿದವು. ಮೊಟ್ಟೆಗಳೆಲ್ಲಾ ಒಂದು ಮಡಕೆಯಲ್ಲಿದ್ದವು. ತೋಳ ಕೂಡಲೆ ನುಂಗುವು ದಕ್ಕೆ ಮೊದಲು ಮಾಡಿತು. ನರಿಯೂ ಒಂದೆರಡು ಮೊಟ್ಟೆಗಳನ್ನು ತಿಂದಿತು. ತಾನು ತಿಂದುದು ಮುಗಿಯಿತೋ ಇಲ್ಲವೋ, ನರಿ ತಾವು ಧುಮಿಕಿ ಬಂದಿದ್ದ ಗೋಡೆಯ ತೊಲೆಗೆ ಹಾರುವುದಕ್ಕೆ ಆರಂಭಿಸಿತು. ಏನಾದರೂ ಅಪಾಯ ಒದಗಿದರೆ ಸುಲಭವಾಗಿ ಹಾರಿ ತಪ್ಪಿಸಿಕೊಳ್ಳುವುದಕ್ಕೆ ಅಭ್ಯಾಸವಾಗಲಿ ಎಂದು ಹಾಗೆ ಮಾಡುತ್ತಿತ್ತು.

ತೋಳ ಅದರ ನೆಗೆದಾಟವನ್ನು ನೋಡಿ "ಹಾಗೇಕೆ ಆಡುತ್ತಿರುವೆ?" ಎಂದು ಕೇಳಿತು.

ನರಿ "ಯಾರಾದರೂ ಬರುತ್ತಿರುವರೇನೋ ಎಂದು ನೋಡುತ್ತಿದ್ದೇನೆ. ಎಚ್ಚರಿಕೆಯಿಂದಿರು. ಹೆಚ್ಚಾಗಿ ತಿನ್ನಬೇಡ" ಎಂದಿತು.

ಅದು ಹಾಗೆನ್ನುವ ಹೊತ್ತಿಗೆ ನರಿ ಮಾಡಿದ್ದ ಸದ್ದಿನಿಂದಲೇ ಎಚ್ಚತ್ತಿದ್ದ ಮನೆಯವನು ಅಲ್ಲಿಗೆ ಬಂದ.

ಅವನನ್ನು ನೋಡಿದ ಕೂಡಲೆ ನರಿ ಕ್ಷಣಮಾತ್ರದಲ್ಲಿ ಗೋಡೆಯ ತೂತಿನಿಂದ ಹೊರಕ್ಕೆ ಹಾರಿತು. ತೋಳವೂ ಅದರ ಹಿಂದೆಯೇ ಹಾರಲು ಯತ್ನಿಸಿತು. ಆದರೆ ಮೊಟ್ಟೆಗಳನ್ನು ನುಂಗಿ ನುಂಗಿ ಅದರ ಹೊಟ್ಟೆ

ಮೊದಲಿದ್ದುದಕ್ಕಿಂತಲೂ ಎರಡರಷ್ಟಾಗಿತ್ತು. ಅದು ಆ ತೂತಿನಲ್ಲಿ ಸಿಕ್ಕಿಕೊಂಡುಬಿಟ್ಟಿತು.

ಮನೆಯವನು ಒಂದು ಕೊಡಲಿಯನ್ನು ತಂದು ಅದು ಸಾಯುವ ವರೆಗೂ ಹೊಡೆದು ಕೊಂದ.

"ಈ ಹಾಳು ತೋಳನ ಸಹವಾಸ ತಪ್ಪಿತಲ್ಲಾ!" ಎಂದುಕೊಂಡು ಸಂತೋಷದಿಂದ ನರಿ ಕಾಡಿನೊಳಕ್ಕೆ ಓಡಿಹೋಯಿತು.

# ರಾಜಕುಮಾರಿ ಕಾಗೆಯಾಗಿದ್ದ ಕತೆ

ಒಬ್ಬ ರಾಣಿಗೆ ಒಂದು ಹೆಣ್ಣು ಮಗುವಿತ್ತು. ಒಂದು ದಿನ ಆ ಮಗು ಬಹಳ ಅತ್ತು ರಂಪಮಾಡಿತು. ರಾಣಿ ಎಷ್ಟು ಸಮಾಧಾನ ಮಾಡಿದರೂ ಅದು ಸುಮ್ಮನಾಗಲಿಲ್ಲ. ಅವಳಿಗೆ ರೇಗಿತು. ಅರಮನೆಯ ಹೊರಗಡೆ ಒಂದೆರಡು ಕಾಗೆಗಳು ಹಾರಾಡುತ್ತಿದ್ದುದು ಅವಳ ಕಣ್ಣಿಗೆ ಬಿತ್ತು. ಅವಳು ಮಗುವಿನ ಕಡೆಗೆ ತಿರುಗಿ "ನೀನೂ ಒಂದು ಕಾಗೆಯಾಗಿ ಹಾರಿಹೋದರೆ ನಾನು ನೆಮ್ಮದಿಯಾಗಿದ್ದೇನು!" ಎಂದಳು. ಆ ಮಾತು ಅವಳ ಬಾಯಿಂದ ಹೊರಬಿದ್ದುದೇ ತಡ, ಆ ಮಗು ಒಂದು ಕಾಗೆಯಾಗಿ ಕಿಟಕಿಯ ಮೂಲಕ ಹಾರಿಹೋಗಿ ದಟ್ಟವಾಗಿ ಬೆಳೆದಿದ್ದ ಒಂದು ಕಾಡನ್ನು ಸೇರಿತು. ಆಮೇಲೆ ರಾಜಕುಮಾರಿ ಏನಾದಳೆಂಬ ವರ್ತಮಾನವೇ ಯಾರಿಗೂ ಗೊತ್ತಾಗಲಿಲ್ಲ.

ಅನೇಕ ವರ್ಷಗಳ ಅನಂತರ ಒಬ್ಬ ಯುವಕ ಆ ಕಾಡಿನಲ್ಲಿ ನಡೆದು ಹೋಗುತ್ತಿದ್ದ. ಎಲ್ಲೋ ಮರದ ಮೇಲೆ ಒಂದು ಕಾಗೆ ಮಾತಾಡಿಕೊಳ್ಳುತ್ತಿದ್ದುದು ಅವನಿಗೆ ಕೇಳಿಸಿತು. ಧ್ವನಿಯ ಗುರುತಿನಿಂದ ಅವನು ಅದು ಇದ್ದ ಮರದ ಹತ್ತಿರ ಹೋದ. ಅದು "ನಾನು ರಾಜನ ಮಗಳಾಗಿ ಹುಟ್ಟಿದೆ. ಯಾವುದೋ ಮಾಟದಿಂದ ಈಗ ಹೀಗೆ ಆಗಿದ್ದೇನೆ. ನನ್ನನ್ನು ಈ ಗತಿಯಿಂದ ಬಿಡುಗಡೆ ಮಾಡುವುದು ನಿನ್ನ ಕೈಯಲ್ಲಿದೆ" ಎಂದಿತು. ಅವನು "ಅದು ಹೇಗೆ? ನಾನೇನು ಮಾಡಬೇಕು?" ಎಂದ. ಕಾಗೆ "ಹೀಗೆಯೇ ಕಾಡಿನಲ್ಲಿ ಸ್ವಲ್ಪ ದೂರ ಹೋಗು, ಒಂದು ಮನೆ ಸಿಕ್ಕುತ್ತದೆ. ಆ ಮನೆಯಲ್ಲಿ ಒಬ್ಬ ಮುದುಕಿ ವಾಸವಾಗಿದ್ದಾಳೆ. ಅವಳು ನಿನಗೆ ಅನ್ನ ನೀರು ಕೊಡುವುದಕ್ಕೆ ಬರುತ್ತಾಳೆ. ಆದರೆ ನೀನು ಅವಳ ಕೈಯಿಂದ ಏನನ್ನೂ ತೆಗೆದುಕೊಳ್ಳಕೂಡದು. ಅವಳು ಕೊಟ್ಟ ಪದಾರ್ಥದ ರುಚಿ

ನೋಡಿದರೂ ಸಾಕು, ನಿನಗೆ ಗಾಢವಾದ ನಿದ್ದೆ ಬಂದುಬಿಡುತ್ತದೆ; ನೀನು ನನಗೆ ಸಹಾಯ ಮಾಡಲು ಆಗುವುದಿಲ್ಲ. ಆ ಮನೆಯ ಹಿಂದುಗಡೆ ಮರದ ಚೆಕ್ಕೆಗಳ ಒಂದು ರಾಸಿಯಿದೆ. ನೀನು ಅದರ ಮೇಲೆ ನಿಂತು ನನ್ನ ಬರುವಿಕೆಗಾಗಿ ಕಾಯುತ್ತಿರಬೇಕು. ನಾನು ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ಮನುಷ್ಯರೂಪವನ್ನು ಧರಿಸಿ ನನ್ನ ಗಾಡಿಯಲ್ಲಿ ಕುಳಿತು ಆಕಡೆ ಬರುತ್ತೇನೆ. ಹೀಗೆ ಮೂರು ದಿವಸ ಮಾಡುತ್ತೇನೆ. ಗಾಡಿಯನ್ನು ಎಳೆಯಲು ಮೊದಲನೆಯ ದಿವಸ ನಾಲ್ಕು ಬಿಳಿಯ ಕುದುರೆಗಳನ್ನೂ ಎರಡನೆಯ ದಿನ ನಾಲ್ಕು ಕಂದುಬಣ್ಣದ ಕುದುರೆಗಳನ್ನೂ ಮೂರನೆಯ ದಿನ ನಾಲ್ಕು ಕಪ್ಪು ಕುದುರೆಗಳನ್ನೂ ಕಟ್ಟಿರುತ್ತೇನೆ. ನೀನು ಮಾತ್ರ ಎಚ್ಚರತಪ್ಪಿ ನಾನು ಆಕಡೆ ಬಂದಾಗ ನಿದ್ದೆ ಮಾಡುತ್ತಿದ್ದರೆ ನನ್ನ ಬಿಡುಗಡೆ ಆಗುವುದಿಲ್ಲ" ಎಂದಿತು.

ಅವನು ಅದು ಹೇಳಿದಂತೆಯೇ ತಪ್ಪದೆ ನಡೆದುಕೊಳ್ಳಲು ಒಪ್ಪಿದ. ಕಾಗೆ ಇನ್ನೊಮ್ಮೆ "ಅಯ್ಯೋ, ನನಗೆ ಗೊತ್ತು. ನೀನು ಮುದುಕಿ ಕೊಟ್ಟಿದ್ದನ್ನು ಹೊಟ್ಟೆಗೆ ಹಾಕಿ ನನ್ನನ್ನು ಉದ್ಧಾರ ಮಾಡಲು ನಿನಗಿರುವ ಯೋಗ್ಯತೆಯನ್ನು ಕಳೆದುಕೊಳ್ಳುವೆ" ಎಂದಿತು. ಅದಕ್ಕೆ ಅವನು "ಅವಳು ಏನು ಕೊಡುವುದಕ್ಕೆ ಬಂದರೂ ಅದನ್ನು ಕೈಯಿಂದ ಕೂಡ ಮುಟ್ಟುವುದಿಲ್ಲ!" ಎಂದು ಮತ್ತೆ ಮತ್ತೆ ಆಣೆಯಿಟ್ಟುಕೊಂಡು ಹೇಳಿದ.

ಅನಂತರ ಅವನು ಕಾಡಿನಲ್ಲಿ ಮುಂದುವರಿದ. ಕಾಗೆ ಹೇಳಿದ್ದ ಮನೆ ಸಿಕ್ಕಿತು. ಅವನು ನೇರವಾಗಿ ಅದರ ಮುಂಭಾಗದ ಪಡಸಾಲೆಗೆ ಹೋದ. ಮುದುಕಿ ಅವನನ್ನು ಎದುರುಗೊಂಡು ಆದರದಿಂದ ಉಪಚಾರ ಮಾಡಿ, "ಪಾಪ, ಬಹಳ ಬಳಲಿದ್ದೀಯ. ಬಿಸಿಲಿನಲ್ಲಿ ನಡೆದೂ ನಡೆದೂ, ಕಾಡಿನ ಕಳ್ಳು ಮುಳ್ಳುಗಳನ್ನು ತುಳಿದು ನಿನಗೆ ಮಿತಿಮೀರಿ ಆಯಾಸವಾಗಿರಬೇಕು. ಒಳಕ್ಕೆ ಬಂದು ದಣಿವನ್ನು ಆರಿಸಿಕೊ. ತಿನ್ನುವುದಕ್ಕೆ ಏನಾದರೂ ತಂದುಕೊಡುತ್ತೇನೆ" ಎಂದಳು.

ಅವನು ಗಾಬರಿಯಿಂದ "ಬೇಡ, ಬೇಡ, ನಾನು ಏನನ್ನೂ ತಿನ್ನುವುದಿಲ್ಲ. ಒಂದು ಗುಟುಕು ನೀರು ಕೂಡ ಬೇಡ ನನಗೆ!" ಎಂದ.

ಆದರೆ ಅವಳು ಅವನನ್ನು ಅಷ್ಟಕ್ಕೇ ಸುಮ್ಮನೆ ಬಿಟ್ಟುಬಿಡುವವಳಲ್ಲ. "ನೀನು ಏನನ್ನೂ ತಿನ್ನದೆ ಹೋದರೆ ಹೋಗಲಿ. ಕುಡಿಯುವುದಕ್ಕೆ ಒಂದು ಲೋಟ ಪಾನಕವನ್ನಾದರೂ ಕೊಡುತ್ತೇನೆ. ಬಿಸಿಲು ಜೋರಾಗಿದೆ. ಒಂದೇ ಒಂದು ಲೋಟ ಪಾನಕ ಕುಡಿದರೆ ಏನೂ ಬಾಧೆಯಾಗುವುದಿಲ್ಲ" ಎಂದು ಬಹಳ ಕರುಣೆಯಿರುವವಳ ಹಾಗೆ ನಟಿಸಿ ಒಳ್ಳೆಯ ಮಾತಾಡಿ ಪುಸಲಾಯಿಸಿದಳು. ಕಡೆಗೆ ಅವನು ಅವಳ ಮಾತಿಗೆ ಮರುಳಾಗಿ ಅವಳು ಕೊಟ್ಟ ಒಂದು ಲೋಟ ಪಾನಕವನ್ನು ಕುಡಿದುಬಿಟ್ಟ.

ಮಧ್ಯಾಹ್ನ ಮೂರು ಗಂಟೆ ಸಮೀಪಿಸಿತು. ಅವನು ಮನೆಯ ಹಿಂದುಗಡೆ ಇದ್ದ ಚಕ್ಕೆಯ ರಾಸಿಯ ಮೇಲೆ ರಾಜಕುಮಾರಿ ಬರುವುದನ್ನೇ ಎದುರುನೋಡುತ್ತಾ ನಿಂತುಕೊಂಡ. ಇದ್ದಕ್ಕಿದ್ದಂತೆಯೇ ಅವನಿಗೆ ಆಯಾಸದಿಂದ ಕೆಳಕ್ಕೆ ಕುಸಿದುಬೀಳುವಂತಾಯಿತು. ಕಡೆಗೆ ತಡೆಯಲಾಗದೆ ಅವನು ಚಕ್ಕೆಗಳ ಮೇಲೆಯೇ ಬಿದ್ದುಕೊಂಡ. ಏನಾದರೂ ನಿದ್ದೆ ಹೋಗಕೂಡದೆಂದು ಅವನು ಎಷ್ಟೆಷ್ಟು ಮನಸ್ಸು ಗಟ್ಟಿಮಾಡಿಕೊಂಡರೂ ನಿಷ್ಫಲವಾಯಿತು. ಒಂದೆರಡು ನಿಮಿಷದಲ್ಲೇ ಅವನ ಕಣ್ಣುಗಳೆರಡೂ ತಮ್ಮಷ್ಟಕ್ಕೆ ತಾವೇ ಮುಚ್ಚಿಕೊಂಡವು. ಆಮೇಲೆ ಪ್ರಪಂಚವೇ ಅದುರುವ ಹಾಗೆ ಸದ್ದಾದರೂ ಅವನಿಗೆ ಎಚ್ಚರಿಕೆ ಆಗುವ ಹಾಗಿರಲಿಲ್ಲ. ಅಂಥ ಗಾಢವಾದ ನಿದ್ದೆ ಅವನನ್ನು ಕವಿಯಿತು. ಮೂರು ಗಂಟೆಗೆ ಸರಿಯಾಗಿ ರಾಜಕುಮಾರಿ ನಾಲ್ಕು ಬಿಳಿಯ ಕುದುರೆಗಳನ್ನು ಕಟ್ಟಿದ್ದ ಸೊಗಸಾದ ಗಾಡಿಯಲ್ಲಿ ಕುಳಿತು ಅಲ್ಲಿಗೆ ಬಂದಳು. ದೂರದಿಂದಲೇ ಅವಳು "ನಾನು ಬಲ್ಲೆ! ಅವನು ನಿದ್ದೆ ಹೋಗುತ್ತಿದ್ದಾನೆ!" ಎಂದು ನಿಟ್ಟುಸಿರುಬಿಟ್ಟಳು. ಹತ್ತಿರ ಬಂದು ನೋಡಲು ಅವಳ ಅನುಮಾನ ಪರಿಹಾರವಾಯಿತು. ನಿರೀಕ್ಷಿಸಿದ್ದಂತೆಯೇ ಅವನು ಅರಿವಿಲ್ಲದೆ ಬಿದ್ದಿದ್ದ. ಅವಳು ಗಾಡಿಯಿಂದ ಇಳಿದುಹೋಗಿ ಅವನನ್ನು ಕೂಗಿ ಅವನ ಮೈಯನ್ನು ಮುಟ್ಟಿ ಅಲ್ಲಾಡಿಸಿದಳು. ಏನು ಮಾಡಿದರೂ ಅವನು ಬೇರೆ ಕಣ್ಣು ಬಿಡಲಿಲ್ಲ.

ಎರಡನೆಯ ದಿನವೂ ಸುಮಾರು ಹನ್ನೆರಡು ಗಂಟೆಯ ಹೊತ್ತಿಗೆ ಮುದುಕಿ ಒಳ್ಳೆಯ ಮಾತಾಡಿ ಅವನು ಒಂದು ಲೋಟ ಪಾನಕ ಕುಡಿಯುವ ಹಾಗೆ ಮಾಡಿದಳು. ಹಿಂದಿನ ದಿನದ ಹಾಗೆಯೇ ಅವನು ಮೊದಲು "ಬೇಡ, ಬೇಡ" ಎಂದವನು, ಕೊನೆಗೆ ಲೋಟವನ್ನು ಬಾಯಿಗೆ ಎತ್ತಿದ.

ಮೂರು ಗಂಟೆ ಆಗುವ ಸಮಯಕ್ಕೆ ಅವನು ರಾಜನ ಮಗಳು ಬರುವುದನ್ನು ಎದುರುನೋಡಲು ಚಕ್ಕೆಯ ರಾಸಿಯ ಮೇಲೆ ಹೋಗಿ ನಿಂತ. ನಿಂತನೋ ಇಲ್ಲವೋ, ಅವನ ಕೈಕಾಲಿನಲ್ಲಿದ್ದ ಶಕ್ತಿಯೆಲ್ಲಾ ಮಾಯವಾಗಿ ಅವನಿಗೆ ಥೊಪ್ಪನೆ ಕೆಳಕ್ಕೆ ಬಿದ್ದುಬಿಡುವ ಹಾಗಾಯಿತು. ನೆಟ್ಟಗೆ ನಿಲ್ಲಲು ಅಸಾಧ್ಯವಾಯಿತು. ಕಡೆಗೆ ಅವನು ಮಲಗಿಯೇ ಬಿಟ್ಟ. ಮಲಗಿದ ಕೂಡಲೆ ನಿದ್ದೆಹೋದ. ರಾಜಕುಮಾರಿ ಕಂದು ಬಣ್ಣದ ಕುದುರೆಗಳನ್ನು ಕಟ್ಟಿದ್ದ ಗಾಡಿಯಲ್ಲಿ ಬಂದಳು. "ನನಗೆ ಗೊತ್ತು, ಅವನು ನಿದ್ದೆ ಹೋಗುತ್ತಿದ್ದಾನೆ!" ಎಂದುಕೊಂಡು ಅವಳು ಕೆಳಗಿಳಿದು ಬಂದು ಅವನನ್ನು ಎಬ್ಬಿಸಲು ಪ್ರಯತ್ನಪಟ್ಟಳು. ಏನು ಮಾಡಿದರೂ ಅವನು ಏಳಲಿಲ್ಲ.

ಮಾರನೆಯ ದಿನ ಮುದುಕಿ ಅವನನ್ನು ಕುರಿತು "ಇದೇನಿದು? ಹೀಗೆ ಅನ್ನ ನೀರು ಬಿಟ್ಟು ಕೃಶವಾಗುತ್ತಾ ಇದ್ದೀಯ? ಸಾಯಬೇಕು ಎಂದು ಆಸೆಯೇನು ನಿನಗೆ?" ಎಂದಳು.

ಅದಕ್ಕೆ ಅವನು "ನಾನು ಇಲ್ಲಿ ಏನನ್ನೂ ತಿನ್ನಕೂಡದು, ಕುಡಿಯ ಕೂಡದು. ನನಗೆ ಏನೂ ಬೇಡ" ಎಂದ.

ಅವಳು ಮೊದಲಿನಂತೆಯೇ ಉಪಾಯದಿಂದ ಸ್ವಲ್ಪ ತಿಂಡಿಯನ್ನೂ ಒಂದು ಲೋಟ ಪಾನಕವನ್ನೂ ಅವನ ಮುಂದಿಟ್ಟಳು. ಪಾನಕವನ್ನು ಕಂಡ ಕೂಡಲೆ ಅವನ ನಾಲಗೆಯಲ್ಲಿ ನೀರೂರಿತು. ಹಿಂದುಮುಂದು ನೋಡದೆ ಅವನು ಇಡಿ ಲೋಟವನ್ನೂ ಬರಿದುಮಾಡಿದ.

ಮೂರು ಗಂಟೆಯ ಹೊತ್ತಿಗೆ ಮತ್ತೆ ಅವನು ರಾಜನ ಮಗಳು ಬರುವುದನ್ನು ಎದುರುನೋಡಲು ಹಿತ್ತಲಿನಲ್ಲಿದ್ದ ಚಕ್ಕೆಯ ರಾಸಿಯ ಮೇಲೆ ಹೋಗಿ ನಿಂತ. ಆದರೆ ಆ ದಿವಸ ಅವನಿಗೆ ಹಿಂದಿನ ಎರಡು

ದಿನಗಳು ಆಗಿದ್ದುದಕ್ಕಿಂತಲೂ ಹೆಚ್ಚು ಆಯಾಸವಾಗಿದ್ದಂತೆ ತೋರಿತು. ಅವನು ಮರದ ತುಂಡಿನ ಹಾಗೆ ಬಿದ್ದುಕೊಂಡು ನಿದ್ದೆಹೋದ. ಮೂರು ಗಂಟೆಗೆ ರಾಜಕುಮಾರಿ ಆ ಕಡೆಗೆ ಬಂದಳು. ಈ ಸಾರಿ ಅವಳ ಗಾಡಿ, ಗಾಡಿಯನ್ನು ಹೊಡೆಯುವವನು, ಅದಕ್ಕೆ ಹೂಡಿದ್ದ ಕುದುರೆಗಳು, ಅವಳ ಉಡುಪು ಎಲ್ಲಾ ಕರ್ರಗೆ ಕಪ್ಪಾಗಿದ್ದವು.

ಅವಳು ಎಂದಿಗಿಂತಲೂ ಹೆಚ್ಚು ವ್ಯಸನದಿಂದ ಕೂಡಿದ್ದಳು. ಅವಳ ಮುಖದಲ್ಲಿ ಕಳೆಯೇ ಇರಲಿಲ್ಲ. ಹಿಂದಿನಂತೆಯೇ ಮತ್ತೆ ಅವಳು "ನನಗೆ ಗೊತ್ತು, ಅವನು ನಿದ್ದೆ ಹೋಗುತ್ತಿದ್ದಾನೆ! ನನ್ನನ್ನು ಈ ಹಾಳು ಮಾಟದಿಂದ ಬಿಡುಗಡೆ ಮಾಡಲು ಈ ದಿನವೂ ಅವನಿಂದ ಆಗುವುದಿಲ್ಲ" ಎಂದುಕೊಂಡೇ ಬಂದಳು. ಹಿಂದಿನಂತೆಯೇ ಅವನು ಆಳವಾದ ನಿದ್ದೆಯಲ್ಲಿ ಮುಳುಗಿದ್ದ. ಅವನನ್ನು ಎಚ್ಚರಗೊಳಿಸಲು ಅವಳು ಮಾಡಿದ ಯತ್ನವೆಲ್ಲಾ ವಿಫಲವಾಯಿತು. ಆದ್ದರಿಂದ ಅವಳು ಅವನ ಪಕ್ಕದಲ್ಲಿ ಒಂದು ಕಾಯಿಹೋಳಿಗೆಯನ್ನೂ ಒಂದು ಸಣ್ಣ ತಂಬಿಗೆಯ ತುಂಬಾ ಕಾಯಿಸಿದ ಹಾಲನ್ನೂ ಇಟ್ಟಳು. ಆ ಹೋಳಿಗೆ ಎಷ್ಟು ತಿಂದರೂ ಕಡಿಮೆಯಾಗುತ್ತಲೇ ಇರಲಿಲ್ಲ; ಆ ಹಾಲನ್ನು ಎಷ್ಟು ಕುಡಿದರೂ ತಂಬಿಗೆ ಬರಿದಾಗುತ್ತಲೇ ಇರಲಿಲ್ಲ. ಅನಂತರ ಅವಳು ತನ್ನ ಹೆಸರನ್ನು ಕೊರೆದಿದ್ದ ಒಂದು ಬಂಗಾರದ ಉಂಗುರವನ್ನು ತನ್ನ ಕೈಬೆರಳಿನಿಂದ ತೆಗೆದು ಅವನ ಬೆರಳಿಗಿಟ್ಟಳು. ಕೊನೆಯದಾಗಿ ಅವಳು ಒಂದು ಕಾಗದವನ್ನು ಬರೆದು ಅವನ ಮಗ್ಗುಲಲ್ಲಿಟ್ಟಳು. ಆ ಕಾಗದದಲ್ಲಿ ತಾನು ಅಲ್ಲಿಟ್ಟಿದ್ದ ಹೋಳಿಗೆ ಹಾಲಿನ ವಿಚಾರವನ್ನೆಲ್ಲಾ ವಿವರಿಸಿ, ಕಡೆಯಲ್ಲಿ "ನೀನು ಇಲ್ಲಿರುವವರೆಗೂ ನನ್ನನ್ನು ಬಿಡುಗಡೆ ಮಾಡಲು ನಿನ್ನಿಂದ ಆಗುವುದಿಲ್ಲ. ನನಗೆ ಸಹಾಯ ಮಾಡಬೇಕೆಂದು ನಿನಗೆ ನಿಜವಾಗಿಯೂ ಅಭಿಲಾಷೆ ಇರುವುದಾದರೆ ನಾನು ಹೇಳಿದಂತೆ ಮಾಡು. ಸಾರಂಗಪರ್ವತ ಎಂಬ ಗಾಜಿನಬೆಟ್ಟವಿದೆ. ಆ ಬೆಟ್ಟದ ನೆತ್ತಿಯ ಮೇಲೆ ಒಂದು ಬೆಳ್ಳಿಯ ಕೋಟೆಯಿದೆ. ಆ ಕೋಟೆಯಲ್ಲಿ ಒಂದು ಚಿನ್ನದ ಅರಮನೆಯಿದೆ. ನಾನು ಅಲ್ಲಿ ವಾಸವಾಗಿರುತ್ತೇನೆ. ಅಲ್ಲಿಗೆ ಬಾ. ಆ ಕೆಲಸ ನಿನಗೆ ಕಷ್ಟವಾಗಲಾರದು" ಎಂದು

ಬರೆದಿದ್ದಳು. ಇಷ್ಟೆಲ್ಲಾ ಮಾಡಿ ಅವಳು ತನ್ನ ಗಾಡಿಗೆ ಹಿಂತಿರುಗಿ ಸಾರಂಗಪರ್ವತದ ಬೆಳ್ಳಿಯ ಕೋಟೆಗೆ ಹೊರಟುಹೋದಳು.

ಸಾಯಂಕಾಲದ ಹೊತ್ತಿಗೆ ಯುವಕನಿಗೆ ಎಚ್ಚರಿಕೆಯಾಯಿತು. ರಾಜಕುಮಾರಿ ಬಂದು ಹೋದಾಗ ತಾನು ನಿದ್ದೆ ಮಾಡುತ್ತಿದ್ದುದನ್ನು ನೆನೆದು ಅವನು ಬಹಳ ವ್ಯಥೆಪಟ್ಟ. "ಅವಳು ಇಲ್ಲಿಗೆ ಆಗಲೇ ಬಂದು ಹೋಗಿದ್ದಾಳೆ. ಇನ್ನು ನಾನು ಅವಳನ್ನು ಮಾಟದಿಂದ ಬಿಡಿಸಲು ಆಗುವುದಿಲ್ಲ. ಅನ್ಯಾಯವಾಗಿ ಕೆಲಸ ಕೆಟ್ಟಿತಲ್ಲ!" ಎಂದುಕೊಂಡು ಅತ್ತಿತ್ತ ನೋಡಿದ. ಪಕ್ಕದಲ್ಲಿದ್ದ ಪದಾರ್ಥಗಳು ಅವನ ಕಣ್ಣಿಗೆ ಬಿದ್ದವು. ರಾಜಕುಮಾರಿ ಬರೆದಿದ್ದ ಕಾಗದವನ್ನು ಓದಿದಾಗ ನಡೆದಿದ್ದ ಸಂಗತಿಯೆಲ್ಲಾ ಅವನಿಗೆ ತಿಳಿಯಿತು. ಸ್ವಲ್ಪವೂ ತಡಮಾಡದೆ ಸಾರಂಗಪರ್ವತದ ಬೆಳ್ಳಿಯ ಕೋಟೆಗೆ ಹೊರಡಲು ಅವನು ಮೇಲಕ್ಕೆದ್ದ. ಆದರೆ ಆ ಪರ್ವತ ಎಲ್ಲಿದೆ, ತಾನು ಯಾವ ದಿಕ್ಕಿಗೆ ಹೋಗಬೇಕು ಎಂಬ ಜ್ಞಾನವೇ ಅವನಿಗೆ ಇರಲಿಲ್ಲ. ಅನೇಕ ದಿನಗಳು ಅದನ್ನು ಹುಡುಕಿಕೊಂಡು ಅಲೆದು, ಕಡೆಗೆ ಅವನು ಕತ್ತಲಮಯವಾಗಿದ್ದ ಒಂದು ಕಾಡಿಗೆ ಬಂದ. ಆ ಕಾಡಿನಲ್ಲಿ ಹದಿನಾಲ್ಕು ದಿನಗಳು ಒಂದೇ ಸಮನಾಗಿ ನಡೆದರೂ ಅವನಿಗೆ ಅಲ್ಲಿಂದ ಹೊರಕ್ಕೆ ಬರಲು ದಾರಿ ಗೊತ್ತಾಗಲಿಲ್ಲ. ಹದಿನೈದನೆಯ ದಿನ ಆಯಾಸದಿಂದ ತತ್ತರಿಸುವಂತಾಗಿ ಅವನು ಒಂದು ಪೊದೆಯಲ್ಲಿ ಮಲಗಿ ನಿದ್ರಿಸಿದ. ಮಾರನೆಯ ದಿನ ಅವನು ಎದ್ದು ಮುಂದುವರಿದು ಸಾಯಂಕಾಲ ಮತ್ತೆ ವಿಶ್ರಮಿಸಿಕೊಳ್ಳಲು ಹವಣಿಸುತ್ತಿದ್ದಾಗ ಯಾರೋ ಅಬ್ಬರಿಸಿದಂತೆ ಧ್ವನಿ ಕೇಳಿಸಿತು. ಅವನು ಪೂರ್ತಿ ಕತ್ತಲಾಗುವವರೆಗೂ ಹಾಗೆಯೇ ಕುಳಿತಿದ್ದ. ಎದುರಿಗೆ ಸ್ವಲ್ಪ ದೂರದಲ್ಲಿ ಒಂದು ಬೆಳಕು ಮಿಣುಕುತ್ತಿತ್ತು. ಅವನು ಅದರ ಕಡೆಗೆ ಹೊರಟ.

ಆ ಬೆಳಕು ಒಂದು ಮನೆಯಲ್ಲಿದ್ದ ದೀಪದ ಬೆಳಕು. ಆ ಮನೆಯ ಮುಂದೆ ಭಯಂಕರನಾದ ಒಬ್ಬ ರಾಕ್ಷಸ ನಿಂತಿದ್ದ. ರಾಕ್ಷಸನನ್ನು ನೋಡಿದ ಕೂಡಲೆ ಯುವಕನ ಎದೆ ಡವಡವ ಎಂದಿತು. "ಆಯಿತು ಇನ್ನು ನನ್ನ ಗತಿ!" ಎಂದು, ಮೊದಲು ಕೊಂಚ ಹೊತ್ತು ಮುಂದಕ್ಕೆ ಹೋಗುವುದಕ್ಕೆ ಅವನು ಅನುಮಾನಿಸಿದ. ಆಮೇಲೆ ಹೇಗೋ ಧೈರ್ಯ ತಂದುಕೊಂಡು

ಮುಂದೆ ನಡೆದ. ಇವನನ್ನು ಕಂಡ ಒಡನೆ ರಾಕ್ಷಸ "ಒಳ್ಳೆ ಅದೃಷ್ಟ ಇವತ್ತು! ನನಗೆ ತಿನ್ನುವುದಕ್ಕೆ ರುಚಿಯಾದ ಆಹಾರ ದೊರೆತು ಬಹಳ ದಿವಸವಾಗಿತ್ತು. ರಾತ್ರಿ ಊಟಕ್ಕೆ ಏನು ಮಾಡಲಿ ಎಂದು ಯೋಚಿಸುತ್ತಿದ್ದೆ. ಸಮಯಕ್ಕೆ ಸರಿಯಾಗಿ ಬಂದಿದ್ದೀಯ! ಬಿಟ್ಟೇನೇ ನಿನ್ನನ್ನು?" ಎಂದು ಕೂಗಿದ. ಯುವಕ "ಬೇಡ! ಖಂಡಿತ ಬೇಡ! ನಿನಗೆ ಅಷ್ಟೊಂದು ಹೊಟ್ಟೆ ಹಸಿದಿದ್ದರೆ ನೀನು ಸಾಕು ಎನ್ನುವವರೆಗೂ ನಾನು ತಿಂಡಿಕೊಡುತ್ತೇನೆ" ಎಂದ. ರಾಕ್ಷಸ "ಹಾಗಾದರೆ ಸರಿ. ನಾನು ನಿನ್ನನ್ನು ಕೊಲ್ಲಬೇಕು ಎಂದುದು ಇನ್ನೇನೂ ಇಲ್ಲದೆ ಇದ್ದುದರಿಂದ. ನೀನು ಬೇರೆ ಆಹಾರ ಕೊಡುವುದಾದರೆ ನಿನ್ನ ತಂಟೆಗೆ ಬರುವುದಿಲ್ಲ" ಎಂದ.

ಇಬ್ಬರೂ ಮನೆಯ ಒಳಕ್ಕೆ ಹೋಗಿ ಎದುರುಬದುರಾಗಿ ಕುಳಿತು ಕೊಂಡರು. ಯುವಕ ರಾಜಕುಮಾರಿ ತನ್ನ ಪಕ್ಕದಲ್ಲಿ ಇಟ್ಟುಹೋಗಿದ್ದ ಹೋಳಿಗೆಯನ್ನೂ ಹಾಲಿನ ತಂಬಿಗೆಯನ್ನೂ ಈಚೆಗೆ ತೆಗೆದ. ದಾರಿಯಲ್ಲಿ ಪ್ರತಿದಿನವೂ ಅವನು ಅವೆರಡನ್ನೂ ಉಪಯೋಗಿಸುತ್ತಿದ್ದರೂ ಅವು ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ರಾಕ್ಷಸನಿಗೆ ಬಹಳ ಸಂತೋಷವಾಯಿತು. ಅವನು ಹೋಳಿಗೆಯನ್ನು ಹಾಲಿನಲ್ಲಿ ಕಲೆಸಿ ಹೊಟ್ಟೆ ಬಿರಿಯುವವರೆಗೂ ತಿಂದ. ಅನಂತರ ಯುವಕ ಸಾರಂಗಪರ್ವತಕ್ಕೆ ದಾರಿ ಯಾವುದೆಂದು ಮೆಲ್ಲನೆ ರಾಕ್ಷಸನನ್ನು ಕೇಳಿದ. ರಾಕ್ಷಸ "ತಾಳು, ನನ್ನ ಹತ್ತಿರ ಕೆಲವು ಭೂಪಟಗಳಿವೆ. ಅವುಗಳಲ್ಲಿ ರಾಜ್ಯಗಳು, ಪ್ರಾಂತ್ಯಗಳು, ಪಟ್ಟಣಗಳು, ಹಳ್ಳಿಗಳು, ಮನೆಗಳು, ಎಲ್ಲವನ್ನೂ ಗುರುತಿಸಿದ್ದಾರೆ. ಅವನ್ನು ನೋಡಿ ದರೆ ನಿನ್ನ ಸಾರಂಗಪರ್ವತ ಎಲ್ಲಿದೆ ಎನ್ನುವುದು ತಿಳಿಯುತ್ತದೆ" ಎಂದು ಮಹಡಿಯ ಮೇಲಕ್ಕೆ ಹೋಗಿ ಭೂಪಟಗಳ ಒಂದು ದೊಡ್ಡ ಕಟ್ಟನ್ನೇ ಕೆಳಕ್ಕೆ ತಂದ. ಇಬ್ಬರೂ ಅವುಗಳನ್ನು ಒಂದೊಂದಾಗಿ ಬಿಚ್ಚಿ ನೆಲದ ಮೇಲೆ ಹಾಸಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರು. ಸಾರಂಗಪರ್ವತ ಎಂಬ ಹೆಸರು ಎಲ್ಲೂ ಕಾಣಲಿಲ್ಲ. ಯುವಕ ನಿರಾಶನಾಗಿ "ಹೋಗಲಿ ಬಿಡು, ನಾನೇ ವಿಚಾರಿಸಿಕೊಂಡು ಹೋಗುತ್ತೇನೆ. ಏನಾದರೂ ಮಾಡಿ ಅಂತೂ ನಾನು ಅಲ್ಲಿಗೆ ಹೋಗಲೇಬೇಕು" ಎಂದ. "ಬೇಡ, ನಮ್ಮ ಅಣ್ಣ ಆಹಾರ ಸಂಪಾದಿಸಲು ಎಲ್ಲೋ ಹೋಗಿದ್ದಾನೆ. ಅವನು ಹಿಂದಿರುಗಿ ಬರುವ

ವರೆಗೂ ಒಂದೆರಡು ದಿನದ ಮಟ್ಟಿಗಾದರೂ ಇಲ್ಲೀ ಇದ್ದು ಹೋಗು" ಎಂದು ಬೇಡಿಕೊಂಡ. ರಾಕ್ಷಸನ ಅಣ್ಣ ಮೂರನೆಯ ದಿವಸ ಬಂದ. ಬಂದಕೂಡಲೆ ಅವರು ಅವನನ್ನು "ಸಾರಂಗಪರ್ವತ ಇರುವುದು ಎಲ್ಲಿ?" ಎಂದು ಪ್ರಶ್ನಿಸಿದರು. ಅವನು "ಮೊದಲು ಊಟ, ಆಮೇಲೆ ಮಾತು" ಎಂದು, ತಾನೂ ತೇಗು ಬರುವವರೆಗೂ ಹಾಲು ಹೋಳಿಗೆಯನ್ನು ಹೊಡೆದ. ಅವನ ಹೊಟ್ಟೆ ಉಬ್ಬಿಕೊಂಡು ಗುಡಾಣದ ಹಾಗೆ ನುಣ್ಣಗೆ ಮುಂದಕ್ಕೆ ಬಂದಿತು. ಅನಂತರ ಅವನು ತನ್ನದೇ ಆಗಿದ್ದ ಒಂದು ಕಂತೆ ಹಳೆಯ ಭೂಪಟಗಳನ್ನು ತಂದು ಅವುಗಳಲ್ಲಿ ಹುಡುಕಿದ. ಕಡೆಗೆ, ಹರಿದು ನಾಲ್ಕು ತುಂಡಾಗಿದ್ದ ಒಂದು ಭೂಪಟದಲ್ಲಿ ಸಾರಂಗಪರ್ವತ ಎಂಬ ಹೆಸರು ಸಣ್ಣ ಅಕ್ಷರದಲ್ಲಿ ಕಂಡುಬಂತು. ಲೆಕ್ಕ ಹಾಕಿ ನೋಡಲು ಅದು ಆ ಸ್ಥಳದಿಂದ ಸಾವಿರಾರು ಮೈಲಿ ದೂರದಲ್ಲಿ ಇರುವುದಾಗಿ ತಿಳಿಯಿತು. ಯುವಕ "ನಾನು ಅಷ್ಟು ದೂರ ನಡೆಯುವುದು ಸಾಧ್ಯವಾದೀತೆ?" ಎಂದ. ದೊಡ್ಡರಾಕ್ಷಸ "ನನಗೆ ಇನ್ನು ಎರಡು ಗಂಟೆಗಳ ಕಾಲ ವಿರಾಮವಿದೆ. ಅಷ್ಟರಲ್ಲಿ ನಿನ್ನನ್ನು ಆ ಪರ್ವತದ ಸಮೀಪಕ್ಕೆ ಎತ್ತಿಕೊಂಡು ಹೋಗಿ ಬಿಟ್ಟು ಬರುತ್ತೇನೆ" ಎಂದು ಒಪ್ಪಿಕೊಂಡ.

ಸಾರಂಗಪರ್ವತಕ್ಕೆ ಸುಮಾರು ಒಂದು ನೂರು ಮೈಲಿಗಳ ದೂರದಲ್ಲಿ ಯುವಕನನ್ನು ಬಿಟ್ಟು ರಾಕ್ಷಸ ತನ್ನ ಕಾಡಿಗೆ ಹಿಂದಿರುಗಿದ. ಯುವಕ ಹಗಲು ರಾತ್ರಿ ಎನ್ನದೆ ನಡೆದು ಆ ಪರ್ವತದ ಬುಡಕ್ಕೆ ಬಂದ. ಆ ಪರ್ವತವೆಲ್ಲಾ ಗಾಜಿನ ಬಂಡೆಗಳಿಂದ ಕೂಡಿದ್ದುದನ್ನು ಕಂಡು ಅವನ ಹೃದಯ ಮತ್ತೆ ವ್ಯಸನದಿಂದ ತುಂಬಿಹೋಯಿತು. ಸಾಧಾರಣ ಮನುಷ್ಯ ರಾರೂ ಅದನ್ನು ಹತ್ತುವಂತೆಯೇ ಇರಲಿಲ್ಲ. ಏರಲು ಪ್ರಯತ್ನಿಸಿದರೆ ಕೈಕಾಲುಗಳೆರಡೂ ನುಣ್ಣನೆಯ ಗಾಜಿನ ಮೇಲೆ ಜರ್‍ರನೆ ಜಾರುತ್ತಿದ್ದವು. ತವಕದಿಂದ ತಲೆಯೆತ್ತಿ ಮೇಲೆ ನೋಡುತ್ತಾ ಅವನು ಬೆಟ್ಟದ ಅಡಿಯಲ್ಲಿ ನಿಂತಿದ್ದ. ಒಮ್ಮೆ ರಾಜಕುಮಾರಿ ಮುತ್ತು ರತ್ನಗಳಿಂದ ಅಲಂಕಾರ ಮಾಡಿದ್ದ ಒಂದು ಸೊಗಸಾದ ಗಾಡಿಯಲ್ಲಿ ಕುಳಿತು ಕೋಟೆಯ ಗೋಡೆಯ ಮೇಲೆ ಸುತ್ತಲೂ ಹೋಗುತ್ತಿದ್ದುದು ಕಾಣಿಸಿತು. ಅವಳನ್ನು ನೋಡಿ ಅವನ ಆನಂದ ಹೇಳತೀರದು. ಆ ಕ್ಷಣವೇ ಅವಳ ಹತ್ತಿರ ಹೋಗ

ಬೇಕೆಂದು ಅವನಿಗೆ ಆಸೆ ಅತಿಯಾಯಿತು. ಆದರೆ ಬೆಟ್ಟವನ್ನು ಹತ್ತಲು ಏನೇನು ಉಪಾಯ ಮಾಡಿದರೂ ಆಗಲಿಲ್ಲ. ಒಂದೆರಡು ಗಜ ಮೇಲೆ ಹೋಗುವಷ್ಟರಲ್ಲಿ ಅವನು ಕೈಕಾಲು ಜಾರಿ ಕೆಳಕ್ಕೆ ಉರುಳುತ್ತಿದ್ದ. ಕೊನೆಗೆ "ಇಲ್ಲೇ ಇದ್ದು ಅವಳೇ ಕೆಳಕ್ಕೆ ಇಳಿದು ಬರುವ ವರೆಗೂ ಸಮಯ ಕಾಯು ತ್ತೇನೆ" ಎಂದು ಒಂದು ಗುಡಿಸಲನ್ನು ಕಟ್ಟಿಕೊಂಡು ಒಂದು ವರ್ಷ ಅಲ್ಲೇ ಇದ್ದ. ರಾಜಕುಮಾರಿ ಬಿಸಿಲಿನಲ್ಲಿ ಥಳಥಳಿಸುವ ಕೋಟೆಯ ಗೋಡೆಯ ಮೇಲೆ ಗಾಡಿಯಲ್ಲಿ ಕುಳಿತು ಹೋಗುವ ನೋಟ ಪ್ರತಿದಿವಸವೂ ಅವನ ಕಣ್ಣಿಗೆ ಬೀಳುತ್ತಲೇ ಇತ್ತು. ಪಾಪ, ಅವನಿಗೆ ಮಾತ್ರ ಅವಳ ಬಳಿಗೆ ಹೋಗುವುದು ಅಸಾಧ್ಯವಾಗಿತ್ತು.

ಒಂದು ದಿನ ಅವನು ತನ್ನ ಗುಡಿಸಲಿನಲ್ಲಿ ಮಂಕಾಗಿ ಕುಳಿತು ಯೋಚಿಸುತ್ತಿದ್ದ. ಆಗ ಅಲ್ಲಿಗೆ ಸ್ವಲ್ಪ ದೂರದಲ್ಲೇ ಮೂರು ಜನ ಕಳ್ಳರು ಒಬ್ಬರೊಡನೊಬ್ಬರು ಕಾದಾಡುತ್ತಿದ್ದುದು ಕಂಡು ಬಂತು. ಅವನು ತಾನು ಇದ್ದ ಕಡೆಯಿಂದಲೇ "ಅಯ್ಯಾ, ನಿಲ್ಲಿಸಿ" ಎಂದು ಕೂಗಿದ. ಈ ಕೂಗನ್ನು ಕೇಳಿ ಕಳ್ಳರು ತಮ್ಮ ಹೊಡೆದಾಟವನ್ನು ನಿಲ್ಲಿಸಿ ಸುತ್ತಲೂ ತಿರುಗಿನೋಡಿ ದರು. ಯಾರೂ ಕಾಣದಿರಲು ಅವರು ಮೊದಲಿಗಿಂತಲೂ ಹೆಚ್ಚಿನ ರೋಷ ದಿಂದ ಗುದ್ದಾಡತೊಡಗಿದರು. ಅವನು ಇನ್ನೊಂದು ಸಾರಿ "ಅಯ್ಯಾ, ನಿಲ್ಲಿಸಿ. ಹೀಗೇಕೆ ಕಚ್ಚಾಡುತ್ತಿದ್ದೀರಿ?" ಎಂದು ಕೂಗಿದ. ಅವರು ಹೊಡೆದಾಟವನ್ನು ನಿಲ್ಲಿಸಿ ಸುತ್ತಲೂ ತಿರುಗಿ ನೋಡಿ, ಯಾರೂ ಕಾಣ ದಿರಲು, ಪುನಃ ತಮ್ಮ ಜಗಳವನ್ನು ಆರಂಭಿಸಿದರು. ಯುವಕ ಮೂರ ನೆಯ ಸಾರಿ "ಅಯ್ಯಾ, ನಿಲ್ಲಿಸಿ" ಎಂದು ಕೂಗಿದ. ಅವರ ಕಾದಾಟಕ್ಕೆ ಕಾರಣ ಏನಿರಬಹುದು ಎಂದು ತಿಳಿದುಕೊಳ್ಳಬೇಕೆಂದು ಅವನಿಗೆ ಕುತೂ ಹಲವಾಯಿತು. ಆದ್ದರಿಂದ ಅವನು ಅವರು ನಿಂತಿದ್ದ ಸ್ಥಳಕ್ಕೆ ಎದ್ದು ಹೋಗಿ "ಇಷ್ಟು ಕೋಪದಿಂದ ಒಬ್ಬರೊಡನೊಬ್ಬರು ಏಕೆ ಹೊಡೆದಾಡು ತ್ತಿದ್ದೀರಿ?" ಎಂದು ಕೇಳಿದ. ಅವರಲ್ಲಿ ಒಬ್ಬನು "ನನಗೆ ಒಂದು ದೊಣ್ಣೆ ಸಿಕ್ಕಿದೆ. ಯಾವುದಾದರೂ ಬಾಗಿಲಿನ ಮೂಲಕ ನಾನು ಹೋಗಬೇಕೆಂದು ಇಚ್ಛೆಯಾಯಿತು ಎನ್ನೋಣ. ಒಂದು ವೇಳೆ ಬಾಗಿಲು ಮುಚ್ಚಿದ್ದರೆ, ಆ ದೊಣ್ಣೆಯಿಂದ ಬಾಗಿಲಿಗೆ ಒಂದು ಏಟುಕೊಟ್ಟರೆ ಸಾಕು, ಅದು ಎಂಥ

ಬಲವಾದ ಬಾಗಿಲಾದರೂ ತಕ್ಷಣ ತೆರೆದುಕೊಳ್ಳುತ್ತದೆ" ಎಂದ. ಇನ್ನೊಬ್ಬನು "ನಾನು ಒಂದು ನಿಲುವಂಗಿ ಸಂಪಾದಿಸಿದ್ದೇನೆ. ಅದನ್ನು ತೊಟ್ಟುಕೊಂಡವನು ಯಾರ ಕಣ್ಣಿಗೂ ಕಾಣದಂತಾಗುತ್ತಾನೆ" ಎಂದು ಹೇಳಿದ. ಮೂರನೆಯವನಿಗೆ ಒಂದು ಕುದುರೆ ದೊರೆತಿತ್ತು. ಅದು ತನ್ನ ಮೇಲೆ ಕುಳಿತ ಸವಾರನನ್ನು ಎಲ್ಲಿಗಾದರೂ ಕರೆದುಕೊಂಡು ಹೋಗುವ ಸಾಮರ್ಥ್ಯ ಪಡೆದಿತ್ತು. ಅದರ ಮೇಲೆ ಕುಳಿತು ಆ ಗಾಜಿನ ಬೆಟ್ಟದ ತುದಿಗೆ ಬೇಕಾದರೂ ಹೋಗಬಹುದಾಗಿತ್ತು. ತಾವು ಸಂಪಾದಿಸಿದ್ದ ವಸ್ತುಗಳನ್ನು ಮೂವರೂ ಒಟ್ಟಿಗೆ ಇದ್ದು ಒಟ್ಟಿಗೆ ಉಪಯೋಗಿಸಬೇಕೆ, ಅಥವಾ ಪ್ರತಿಯೊಬ್ಬನೂ ತನ್ನ ಪದಾರ್ಥವನ್ನು ತಾನು ತೆಗೆದುಕೊಂಡು ಬೇರೆ ಹೋಗಬೇಕೆ ಎಂಬ ಚರ್ಚೆಯೇ ಈಗ ಅವರ ಕಾದಾಟಕ್ಕೆ ಕಾರಣವಾಗಿದ್ದುದು. ಎಷ್ಟು ವಾದಿಸಿದರೂ ಅವರು ಎಲ್ಲರೂ ಒಪ್ಪುವಂತಹ ತೀರ್ಮಾನಕ್ಕೆ ಬರಲು ಸಾಧ್ಯವಾಗಿರಲಿಲ್ಲ. ಇದನ್ನು ಕೇಳಿ ಯುವಕ "ನಿಮ್ಮ ಜಗಳವನ್ನು ನಾನು ಬಗೆಹರಿಸುತ್ತೇನೆ, ಏನು ಹೇಳುವಿರಿ?" ಎಂದ. ಅವರೆಲ್ಲರೂ "ಹಾಗೆ ಆಗಲಿ! ಸದ್ಯ ಅಷ್ಟು ಮಾಡಿದರೆ ಸಾಕು! ದಮ್ಮಯ್ಯ, ಏನು ಹೇಳು?" ಎಂದು ಗೋಗರೆದರು. ಅವನು "ನೀವು ಹೇಳಿರುವುದೆಲ್ಲಾ ನಿಜ ಎಂದು ನನಗೆ ನಿಸ್ಸಂಶಯವಾಗಿ ಗೊತ್ತಾದ ಮೇಲೆ ತಾನೆ ನಾನು ಒಂದು ತೀರ್ಮಾನಕ್ಕೆ ಬರುವುದು ಸಾಧ್ಯ?" ಎಂದ. ಕಳ್ಳರು "ಹೌದು! ಹೌದು! ನಿನಗೇಕೆ ಸಂಶಯ?" ಎಂದರು. ಒಬ್ಬನು ಅವನನ್ನು ತನ್ನ ಕುದುರೆಯ ಮೇಲೆ ಕೂಡಿಸಿದ. ಇನ್ನೊಬ್ಬನು ಅವನ ಕೈಗೆ ತನ್ನ ದೊಣ್ಣೆಯನ್ನು ಕೊಟ್ಟ. ಮೂರನೆಯವನು ಅವನ ಮೈಗೆ ತನ್ನ ನಿಲುವಂಗಿಯನ್ನು ತೊಡಿಸಿದ. ನಿಲುವಂಗಿಯನ್ನು ತೊಟ್ಟುಕೊಂಡ ಕೂಡಲೆ ಯುವಕ ಅವರ ಕಣ್ಣಿಗೆ ಕಾಣಿಸದಾದ. ಅನಂತರ ಅವನು ಅವರನ್ನೆಲ್ಲಾ ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ಚೆನ್ನಾಗಿ ಹೊಡೆದು "ಇಗೋ, ನಿಮ್ಮ ಜಗಳವನ್ನು ಪರಿಹರಿಸುವುದಕ್ಕೆ ಇದೇ ನನ್ನ ಉಪಾಯ! ಈಗಲಾದರೂ ತೃಪ್ತಿಯಾಯಿತೋ ಇಲ್ಲವೋ ಎಲ್ಲರಿಗೂ?" ಎನ್ನುತ್ತಾ ಓಡಿಹೋದ.

ಕುದುರೆ ಸ್ವಲ್ಪವೂ ಕಷ್ಟವಿಲ್ಲದೆ ಅವನನ್ನು ಬೆಟ್ಟದ ಮೇಲಕ್ಕೆ ತಂದಿತು. ಕೋಟೆಯ ಬಾಗಿಲನ್ನು ಮುಚ್ಚಿ ಭದ್ರಮಾಡಿದ್ದರು. ಯುವಕ

ದೊಣ್ಣೆಯಿಂದ ಅದಕ್ಕೆ ಒಂದು ಪೆಟ್ಟುಕೊಟ್ಟ. ಕ್ಷಣಮಾತ್ರದಲ್ಲಿ ಅದು ತೆರೆಯಿತು. ಅವನು ಇನ್ನೇನೂ ಅಡಚಣೆಯಿಲ್ಲದೆ ಕೋಟೆಯನ್ನು ಹೊಕ್ಕು ಕುದುರೆಯನ್ನು ಒಂದು ಮರಕ್ಕೆ ಕಟ್ಟಿ ರಾಜಕುಮಾರಿಯ ಅರಮನೆಯನ್ನು ಪ್ರವೇಶಿಸಿ, ನೇರವಾಗಿ ಅವಳ ಕೋಣೆಗೇ ಹೋದ. ಅವನು ಬರುವ ಹೊತ್ತಿಗೆ ಸರಿಯಾಗಿ ಅವಳು ಒಂದು ಚಿನ್ನದ ಬಟ್ಟಲನ್ನು ಬಾಯಿಗೆ ಒಯ್ಯುತ್ತಿದ್ದಳು. ಅದರ ತುಂಬ ಕುಂಕುಮ ಕೇಸರಿಯನ್ನು ಹಾಕಿದ್ದ ಹಾಲು ಘಮಘಮಿಸುತ್ತಿತ್ತು. ಅವನು ನಿಲುವಂಗಿಯನ್ನು ತೊಟ್ಟಿದ್ದುದರಿಂದ ಅವಳಿಗೆ ಕಾಣಿಸುತ್ತಿರಲಿಲ್ಲ. ಅವನು ಸದ್ದುಮಾಡದೆ ಮೆಲ್ಲನೆ ಮುಂದೆ ನಡೆದು ತನ್ನ ಬೆರಳಿನ ಮೇಲಿದ್ದ ರಾಜಕುಮಾರಿಯ ಉಂಗುರವನ್ನು ಅವಳ ಬಟ್ಟಲಿಗೆ ಎಸೆದ. ಅದು ತಳಕ್ಕೆ ತಗುಲಿ "ಠಣ್" ಎಂದು ಶಬ್ದಮಾಡಿತು. ಅವಳು ಆಶ್ಚರ್ಯದಿಂದ ಹಾಲನ್ನೆಲ್ಲಾ ಒಂದೇ ಗುಟುಕಿನಲ್ಲೇ ಕುಡಿದು ನೋಡಿದಳು. ಅವಳ ಕಣ್ಣುಗಳೆರಡೂ ಅರಳಿದವು. "ಹಾ! ಈ ಉಂಗುರ ನನ್ನದೇ! ಹಾಗಾದರೆ ನನ್ನನ್ನು ಬಿಡುಗಡೆ ಮಾಡುವ ಯುವಕನೂ ಇಲ್ಲಿಗೆ ಬಂದಿರಬೇಕು!" ಎಂದು ಅವಳು ಧಿಗ್ಗನೆ ಎದ್ದು ಅರಮನೆಯಲ್ಲೆಲ್ಲಾ ಅವನಿಗಾಗಿ ಹುಡುಕಾಡಿದಳು.

ಇಷ್ಟುಹೊತ್ತಿಗೆ ಅವನು ಅರಮನೆಯ ಹೊರಗಡೆ ಬಂದು, ಮತ್ತೆ ಕುದುರೆಯ ಮೇಲೆ ಕುಳಿತುಕೊಂಡು, ನಿಲುವಂಗಿಯನ್ನು ಬಿಚ್ಚಿಹಾಕಿದ್ದ. ಒಳಗಡೆ ಯಾವ ಕೊಠಡಿಯಲ್ಲೂ ಅವನು ಕಾಣದಿರಲು, ರಾಜಕುಮಾರಿಯೂ ಹೊರಬಾಗಿಲಿಗೆ ಬಂದಳು. ಅಲ್ಲೇ ಇದ್ದ ಯುವಕನನ್ನು ನೋಡಿ ಅವಳ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಅವಳು ಉತ್ಸಾಹದಿಂದ ಕೂಗಿದಳು. ಅವನು ಕುದುರೆಯಿಂದ ಕೆಳಗಿಳಿದು ಅವಳ ಹತ್ತಿರಕ್ಕೆ ಬಂದ. ಒಬ್ಬರನ್ನೊಬ್ಬರು ಪ್ರೀತಿಯಿಂದ ಅಪ್ಪಿಕೊಂಡರು. ರಾಜಕುಮಾರಿ ಅವನನ್ನು ಚುಂಬಿಸಿ, "ಇನ್ನು ನನಗೆ ಯಾವ ಮಾಟದಿಂದಲೂ ಅಪಾಯವಿಲ್ಲ. ಈಗ ನೀನು ನನ್ನನ್ನು ಬಿಡುಗಡೆ ಮಾಡಿ ಕಾಪಾಡಿದೆ. ನಾಳೆಯ ದಿನವೇ ನಮ್ಮ ಮದುವೆ ನಡೆಯಲಿ" ಎಂದಳು.

# ಅದೃಷ್ಟವಂತರಾದ ಮೂವರು ಅಣ್ಣತಮ್ಮಂದಿರು

ಒಂದು ಊರಿನಲ್ಲಿ ಒಬ್ಬ ಬಡವನಿದ್ದ. ಒಂದು ದಿನ ಅವನು ತನ್ನ ಮೂವರು ಮಕ್ಕಳನ್ನೂ ಕರೆದು, ಅವರಲ್ಲಿ ಹಿರಿಯವನಿಗೆ ಒಂದು ಹುಂಜವನ್ನೂ ಎರಡನೆಯವನಿಗೆ ಒಂದು ಕುಡಗೋಲನ್ನೂ ಮೂರನೆಯವನಿಗೆ ಒಂದು ಬೆಕ್ಕನ್ನೂ ಕೊಟ್ಟು, "ಮಕ್ಕಳೆ, ನಾನು ಸಾಯುವ ಕಾಲ ಸಮೀಪಿಸಿತು. ನಿಮಗೆಲ್ಲಾ ಬೇಕಾದಷ್ಟು ಆಸ್ತಿಯನ್ನು ಬಿಟ್ಟುಹೋಗಬೇಕೆಂದು ನನಗೇನೋ ಆಸೆ. ಏನುಮಾಡಲಿ? ನನ್ನ ಕೈಯಲ್ಲಿ ಒಂದು ಕಾಸೂ ಇಲ್ಲ. ನಾನು ಈಗ ನಿಮಗೆ ಕೊಟ್ಟಿರುವ ಪದಾರ್ಥಗಳ ಬೆಲೆ ಬಹಳ ಅಲ್ಪ. ಆದರೆ ನೀವು ಸರಿಯಾದ ರೀತಿಯಲ್ಲಿ ನಿಮ್ಮ ಬುದ್ಧಿಯನ್ನು ಉಪಯೋಗಿಸಿದರೆ ಅವುಗಳ ಸಹಾಯದಿಂದಲೇ ಬೇಕಾದಷ್ಟು ಹಣ ಸಂಪಾದಿಸಬಹುದು. ನಿಮ್ಮ ನಿಮ್ಮ ಕೈಗೆ ಬಂದಿರುವ ವಸ್ತು ಯಾವ ದೇಶದಲ್ಲಿ ಇದುವರೆಗೂ ಇಲ್ಲವೇ ಇಲ್ಲವೋ ಆ ದೇಶಕ್ಕೆ ಹೋದರೆ ನೀವೆಲ್ಲರೂ ಶ್ರೀಮಂತರಾಗುವಿರಿ" ಎಂದು ಹೇಳಿದ.

ತಂದೆ ಸತ್ತ ಮೇಲೆ ಮೊದಲನೆಯ ಮಗ ತನ್ನ ಹುಂಜದೊಡನೆ ಹೊರಟ. ಆದರೆ ಅವನು ಹೋದ ಕಡೆಯೆಲ್ಲಾ ಹುಂಜಗಳು ಹೇರಳವಾಗಿದ್ದವು. ಬೀದಿಗಳ ತುಂಬಾ ಅವುಗಳ ಕೂಗೇ ಆಗಿತ್ತು. ಜೊತೆಗೆ ತಗಡಿನಲ್ಲಿ ಹುಂಜಗಳನ್ನು ಕತ್ತರಿಸಿ ಮನೆಗಳ ಹೆಂಚುಗಳ ಮೇಲೆ ಸಿಕ್ಕಿಸಿರುತ್ತಿದ್ದರು. ಇವು ಗಿರ್ರನೆ ಸುತ್ತುತ್ತ ಗಾಳಿ ಯಾವ ಕಡೆಯಿಂದ ಯಾವ ಕಡೆಗೆ ಬೀಸುತ್ತಿದ್ದಿತೆಂದು ತೋರಿಸುತ್ತಿದ್ದವು. ಆದುದರಿಂದ ಇವನ ಹಕ್ಕಿ ಯಾರಿಗೂ ಹೊಸದಾಗಿರಲಿಲ್ಲ. ಎಲ್ಲಿಗೆ ಹೋದರೂ ಅದನ್ನು ಕತ್ತೆತ್ತಿ ನೋಡುವವರು ಕೂಡ ಯಾರೂ ಇರಲಿಲ್ಲ. ತನ್ನ ಹಣೆಯಬರಹ ಚೆನ್ನಾಗಿಲ್ಲವೆಂದು ಅವನಿಗೆ ಬಹಳ ವ್ಯಸನವಾಯಿತು. ಕಡೆಗೆ ಅವನು

ಕಡಲಿನ ನಡುವೆ ಇದ್ದ ಒಂದು ದ್ವೀಪಕ್ಕೆ ಬಂದ. ಅಲ್ಲಿದ್ದ ಜನ ಹುಂಜದ ಹೆಸರನ್ನೇ ಕೇಳಿರಲಿಲ್ಲ. ಹೊತ್ತು ಎಷ್ಟಾಯಿತೆಂದು ಲೆಕ್ಕ ಮಾಡುವುದಕ್ಕೂ ಅವರಿಗೆ ಬರುತ್ತಿರಲಿಲ್ಲ. ಬೆಳಗಾಗುವುದು, ಸಂಜೆಯಾಗುವುದು, ಕತ್ತಲಾಗುವುದು—ಇಷ್ಟೇನೋ ಅವರಿಗೆ ಕಾಣುತ್ತಿತ್ತು. ಆದರೆ ರಾತ್ರಿ ಒಂದು ವೇಳೆ ಅವರು ಎಚ್ಚರವಾಗಿರಬೇಕಾಗಿದ್ದ ಅಗತ್ಯಬಿದ್ದರೆ ಗಂಟೆ ಎಷ್ಟಾಯಿತೆಂದು ತಿಳಿಯುವ ವಿಧಾನವೇ ಅವರಿಗೆ ಗೊತ್ತಿರಲಿಲ್ಲ. ಸರಿಯಾದ ಗಿರಾಕಿಗಳು ಸಿಕ್ಕಿದರು ಎಂದು ಹುಂಜದವನಿಗೆ ಬಹಳ ಸಂತೋಷ ವಾಯಿತು. ಅವನು ಅದನ್ನು ಅವರಿಗೆ ತೋರಿಸುತ್ತಾ "ಇಲ್ಲಿ ನೋಡಿ, ಎಂಥ ಸೊಗಸಾದ ಪ್ರಾಣಿ ಇದು! ಒಳ್ಳೆ ಸಿಪಾಯಿಯ ಹಾಗೆ ನಡೆಯುತ್ತದೆ! ಇದರ ನೆತ್ತಿಯ ಮೇಲೆ ಎಷ್ಟು ಮುದ್ದಾದ ಶಿಖಿ ಇದೆ! ಇದು ಪ್ರತಿ ರಾತ್ರಿಯೂ ತಪ್ಪದೆ ಮೂರು ಸಾರಿ ಕೂಗುತ್ತದೆ. ಇದು ಕೊನೆಯ ಸಾರಿ ಕೂಗಿದ ಸ್ವಲ್ಪ ಹೊತ್ತಿಗೆ ಸೂರ್ಯ ಹುಟ್ಟುತ್ತಾನೆ. ಕೆಲವುಸಾರಿ ಇದು ಹಗಲಿನಲ್ಲೂ ಕೂಗುವುದುಂಟು. ಹವಾಮಾನ ಬದಲಾಯಿಸುತ್ತದೆ ಎನ್ನುವುದಕ್ಕೆ ಅದು ಸೂಚನೆ" ಎಂದು ಅದರ ಗುಣಗಳನ್ನು ಕೊಂಡಾಡಿದ. ಇದರಿಂದ ಆ ದ್ವೀಪದ ಜನ ಸುಪ್ರೀತರಾದರು. ಒಂದು ರಾತ್ರಿಯೆಲ್ಲಾ ಅವರು ಎಚ್ಚರವಾಗಿದ್ದು ಆ ಹುಂಜ ಎರಡು ಗಂಟೆಗೆ, ನಾಲ್ಕು ಗಂಟೆಗೆ, ಆರು ಗಂಟೆಗೆ ಸರಿಯಾಗಿ "ಕ್ಕೊ ಕ್ಕೊ ಕ್ಕೋ" ಎಂದು ಗಟ್ಟಿಯಾಗಿ ಕೂಗಿದುದನ್ನು ಕೇಳಿ ಆನಂದಿಸಿದರು. ಮಾರನೆಯ ದಿನ ಎಲ್ಲರೂ ಅವನ ಸುತ್ತಲೂ ಸೇರಿ ಅದನ್ನು ತಮಗೆ ಮಾರಬೇಕೆಂದೂ ತಾವು ಅದಕ್ಕೆ ಅವನು ಕೇಳಿದಷ್ಟು ಬೆಲೆಯನ್ನು ಕೊಡುವುದಾಗಿಯೂ ಹೇಳಿದರು. ಅವನು "ಒಂದು ಕತ್ತೆ ತನ್ನ ಬೆನ್ನಿನ ಮೇಲೆ ಎಷ್ಟು ಭಾರವನ್ನು ಹೊರಬಲ್ಲುದೋ ಅಷ್ಟು ರೂಪಾಯಿಗಳು ಅದರ ಬೆಲೆ" ಎಂದ. "ಇಂಥ ಪ್ರಾಣಿಗೆ ಅದೇನೂ ಹೆಚ್ಚಲ್ಲ!" ಎಂದು ಅವರೆಲ್ಲರೂ ಒಟ್ಟಿಗೆ ಕೂಗಿ, ಅಷ್ಟು ಹಣವನ್ನೂ ಕೂಡಲೆ ಕೊಟ್ಟು ಹುಂಜವನ್ನು ತಮ್ಮ ವಶಕ್ಕೆ ತೆಗೆದು ಕೊಂಡರು.

ಅವನು ತನ್ನ ಐಶ್ವರ್ಯದೊಂದಿಗೆ ಊರಿಗೆ ಹಿಂದಿರುಗಿದಾಗ ಅವನ ತಮ್ಮಂದಿರಿಬ್ಬರಿಗೂ ಬಹಳ ವಿಸ್ಮಯವಾಯಿತು. ಎರಡನೆಯವನು

"ನಾನೂ ನಮ್ಮ ಅಣ್ಣನಂತೆಯೇ ಸಂಚಾರ ಹೋಗಿ ನನ್ನ ಕುಡಗೋಲು ಏನಾದರೂ ಪ್ರಯೋಜನಕ್ಕೆ ಬಂದೀತೇನೋ ನೋಡುತ್ತೇನೆ!" ಎಂದು ಹೊರಟ. ಮೊದಮೊದಲು ಅವನಿಗೂ ಎಲ್ಲಿಗೆ ಹೋದರೂ ನಿರಾಸೆ ಯಾಯಿತು. ಕುಡಗೋಲನ್ನು ಕಾಣದವರೂ ಅದರ ಉಪಯೋಗವನ್ನು ಅರಿಯದವರೂ ಯಾರೂ ಇರಲಿಲ್ಲ. ಕಡೆಗೆ ಅದೃಷ್ಟವಶಾತ್ ಅವನು ಒಂದು ದ್ವೀಪಕ್ಕೆ ಬಂದ. ಆ ದ್ವೀಪದ ನಿವಾಸಿಗಳಿಗೆ ಕುಡಗೋಲು ಎಂದರೆ ಅದೊಂದು ಮನುಷ್ಯನೋ ಪ್ರಾಣಿಯೋ ಆಯುಧವೋ ಯಾವುದೂ ಗೊತ್ತಿರಲಿಲ್ಲ. ಬೆಳೆ ಕೊಯ್ಲಿಗೆ ಹದವಾದಾಗ ಗಿಡಗಳನ್ನು ಒಂದೊಂದಾಗಿ ಕೈ ಬೆರಳುಗಳಿಂದ ಹಿಡಿದು ಕೀಳುವುದು ಅವರ ಪದ್ಧತಿಯಾಗಿತ್ತು. ಇದರಿಂದ ಅವರ ಅಂಗೈಗಳಿಗೆ ನೋವಾಗಿ ಕೆಲಸ ಬಹಳ ನಿಧಾನವಾಗಿ ಸಾಗುತ್ತಿದ್ದುದಲ್ಲದೆ ಎಷ್ಟೋ ಕಾಳು ನೆಲದ ಮೇಲೆ ಉದುರಿಬಿದ್ದು ಹಾಳಾಗುತ್ತಿತ್ತು. ಕುಡಗೋಲಿನವನು ಆ ದ್ವೀಪದ ಚರಿತ್ರೆಯಲ್ಲೇ ಮೊಟ್ಟ ಮೊದಲನೆಯ ಸಾರಿ ತನ್ನ ಆಯುಧವನ್ನು ಉಪಯೋಗಿಸಿದ. ಅದನ್ನು ಕೈಯಲ್ಲಿ ಹಿಡಿದು ಅವನು ಏಳೆಂಟು ದಿನದಲ್ಲಿ ಆ ದ್ವೀಪದಲ್ಲಿದ್ದ ಪೈರನ್ನೆಲ್ಲಾ ನಿರಾಯಾಸವಾಗಿ ಕಟಾವುಮಾಡಿಬಿಟ್ಟ. ಅಲ್ಲಿಯ ಜನರ ಆಶ್ಚರ್ಯಕ್ಕಂತೂ ಪಾರವೇ ಇರಲಿಲ್ಲ! ಎಲ್ಲರೂ ಬಾಯಿಬಿಟ್ಟುಕೊಂಡು ಒಂದೇ ಸಮನೆ ಅವನ ಕುಡಗೋಲನ್ನೇ ನೋಡುತ್ತಾ ನಿಂತಿರುತ್ತಿದ್ದರು. ಅವನು ಕೇಳಿದಷ್ಟು ಹಣ ಕೊಟ್ಟು ಅದನ್ನು ಕೊಂಡುಕೊಳ್ಳಬೇಕೆಂದು ಅವರು ನಿರ್ಧರಿಸಿದರು. "ಪಾಪ, ಅರಿಯದ ಜನ! ಇವರಿಂದ ಬಹಳ ತೆಗೆದುಕೊಳ್ಳಕೂಡದು" ಎಂದು ಯೋಚಿಸಿ ಅವನು ಉದಾರಬುದ್ಧಿಯಿಂದ ಒಂದೇ ಒಂದು ಕುದುರೆ ಹೊರುವಷ್ಟು ರೂಪಾಯಿಗಳಿಗೆ ಅದನ್ನು ಅವರಿಗೆ ಮಾರಿದ.

ಅಣ್ಣಂದಿರಿಬ್ಬರ ಅದೃಷ್ಟವನ್ನು ಕಂಡು ಮೂರನೆಯವನ ಆಸೆ ಉಕ್ಕಿತು. ತನ್ನ ಬೆಕ್ಕಿನ ಮಹಾತ್ಮೆಯನ್ನು ಪರೀಕ್ಷಿಸಿಬಿಡಬೇಕೆಂದು ನಿಶ್ಚಯಿಸಿ, ಅವನು ಅದರೊಡನೆ ಊರಿಂದ ಊರಿಗೆ ಅಲೆದ. ಪ್ರಾರಂಭ ದಲ್ಲಿ ಮೊದಲನೆಯವರಿಬ್ಬರಿಗೂ ಆದಂತೆಯೇ ಇವನಿಗೂ ಜಯ ದೊರೆಯ ಲಿಲ್ಲ. ಎಲ್ಲಿ ನೋಡಿದರೂ ಬೇಕುಬೇಕಾದಷ್ಟು ಬೆಕ್ಕುಗಳಿದ್ದವು. ಎಷ್ಟೋ

ಕಡೆ ಜನ ಅವುಗಳ ಕಾಟ ತಡೆಯಲಾರದೆ ಮರಿಗಳು ಹುಟ್ಟಿದ ಕೂಡಲೆ ಅವನ್ನು ನೀರಿನಲ್ಲಿ ಮುಳುಗಿಸಿ ಸಾಯಿಸಿಬಿಡುತ್ತಿದ್ದರು. ಕೊನೆಗೆ ಇವನೂ ಒಂದು ದ್ವೀಪಕ್ಕೆ ಹೋದ. ಅಲ್ಲಿ ಅದುವರೆಗೂ ಬೆಕ್ಕಿನ ಮುಖ ನೋಡಿದ್ದವನು ಒಬ್ಬನಾದರೂ ಇರಲಿಲ್ಲ. ಆದರೆ ಇಲಿಗಳು ಮಾತ್ರ ಆ ದ್ವೀಪದಲ್ಲಿ ಲಕ್ಷಾಂತರ ಇದ್ದವು. ಎಲ್ಲಿ ಎಂದರೆ ಅಲ್ಲಿ ನಿರ್ಭಯವಾಗಿ ಓಡಾಡಿ ಅವು ಮನುಷ್ಯರಿಗೆ ಕೊಡುತ್ತಿದ್ದ ತೊಂದರೆ ಅಷ್ಟಿಷ್ಟಲ್ಲ. ಯಾರ ಮನೆಯಲ್ಲಿ ನೋಡಿದರೂ ಇಲಿಗಳ ಕುಣಿತವೇ ಕುಣಿತ, ಕೋಲಾಹಲವೇ ಕೋಲಾಹಲವಾಗಿತ್ತು. ಪ್ರಜೆಗಳೆಲ್ಲಾ ಪ್ರತಿನಿತ್ಯವೂ ರಾಜನಿಗೆ ಮೊರೆಯಿಡುತ್ತಿದ್ದರು. ಪಾಪ! ರಾಜ ತಾನೆ ಏನು ಮಾಡಿಯಾನು? ಅವನ ಅರಮನೆಯೇ ಇಲಿಗಳಿಗೆ ದೊಡ್ಡ ಬಿಡದಿಯಾಗಿತ್ತು. ಯಾವ ಮೂಲೆಯಲ್ಲಿ ಕಿವಿ ಇಟ್ಟರೂ ಇಲಿಗಳ ಕೂಗು, ಯಾವ ಪದಾರ್ಥದಲ್ಲಿ ನೋಡಿದರೂ ಇಲಿಗಳ ಹಲ್ಲುಗಳ ಗುರುತುಗಳು ಇದ್ದವು. ಇವನ್ನು ಹೇಗೆ ನಾಶಮಾಡಬೇಕೆಂದು ಯೋಚಿಸಿ ಯೋಚಿಸಿ ಮಂತ್ರಿಗಳೆಲ್ಲಾ ದಣಿದುಹೋಗಿದ್ದರು. ತಲೆ ಕೆಟ್ಟು ಒಬ್ಬಿಬ್ಬರಿಗೆ ಹುಚ್ಚು ಕೂಡ ಹಿಡಿದಿತ್ತು. ಆದ್ದರಿಂದ ಬೆಕ್ಕಿನ ಸಾಹಸಕ್ಕೆ ಒಳ್ಳೆಯ ಕಾರ್ಯಕ್ಷೇತ್ರವೇ ಲಭಿಸಿತು. ಅರಮನೆಯೊಳಕ್ಕೆ ಕಾಲಿಟ್ಟ ಕೆಲವು ನಿಮಿಷಗಳಲ್ಲೇ ಅದು ಒಂದು ಒಂದು ದೊಡ್ಡ ಕೋಣೆಯಲ್ಲಿದ್ದ ಇಲಿಗಳನ್ನೆಲ್ಲಾ ಬೇಟೆಯಾಡಿಬಿಟ್ಟಿತು. ಇದರ ವಿಚಾರ ಪ್ರಜೆಗಳಿಗೆ ತಿಳಿದ ಒಡನೆ ಅವರೆಲ್ಲಾ ಗುಂಪುಗುಂಪಾಗಿ ಅರಮನೆಯ ಎದುರಿನ ಅಂಗಳದಲ್ಲಿ ಬಂದು ನಿಂತರು. ಏನಾದರೂ ಮಾಡಿ ಇಷ್ಟು ಶ್ರೇಷ್ಠವಾದ ಪ್ರಾಣಿಯನ್ನು ಪಡೆಯಲೇಬೇಕೆಂದು ಎಲ್ಲರೂ ಬಹಳ ನಮ್ರತೆಯಿಂದ ರಾಜನಿಗೆ ಅಡ್ಡಬಿದ್ದು ಬೇಡಿಕೊಂಡರು. ಜನಗಳ ಕಷ್ಟವನ್ನು ಪರಿಹಾರ ಮಾಡಲು ಆ ದೊರೆ ಯಾವಾಗಲೂ ಹಾತೊರೆಯುತ್ತಿದ್ದ. ಆದ್ದರಿಂದ ಅವನು ತಕ್ಷಣವೇ ಹೇಳಿದಷ್ಟು ದುಡ್ಡು ಕೊಟ್ಟು ಆ ಬೆಕ್ಕನ್ನು ಕೊಂಡು. ಕೊಂಡ. ಅವನು ಅದಕ್ಕೆ ಕೊಟ್ಟ ಬೆಲೆ ಒಂದು ಆನೆ ಹೊರುವಷ್ಟು ರೂಪಾಯಿಗಳು. ಹೀಗೆ ಮೂರನೆಯವನು ತನ್ನ ಅಣ್ಣಂದಿರಿಗಿಂತಲೂ ಹೆಚ್ಚು ಹಣ ಗಳಿಸಿದ.

ಅತ್ತ ಬೆಕ್ಕು ಅರಮನೆಯಲ್ಲಿದ್ದ ಇಲಿಗಳನ್ನೆಲ್ಲಾ ಒಂದಾಗುತ್ತಲೇ ಇನ್ನೊಂದರಂತೆ ಕೊಂದು ಹೊಟ್ಟೆಗೆ ತುಂಬಿತು. ಸ್ವಲ್ಪ ಕಾಲದಲ್ಲೇ ಅರಮನೆಯಲ್ಲಿದ್ದ ಇಲಿಗಳ ಸಂಖ್ಯೆ ಅರ್ಧಕ್ಕರ್ಧ ಇಳಿದುಹೋಯಿತು. ಕಡೆಗೆ ಇಲಿಗಳನ್ನು ಹಿಡಿದೂ ಹಿಡಿದೂ ಬೆಕ್ಕು ದಣಿದುಬಿಟ್ಟಿತು. ಅಷ್ಟರಲ್ಲಿ ಬಾಯಾರಿಕೆ ಬೆಳೆಯಲು ಅದು ಒಂದು ಕಡೆ ಸುಮ್ಮನೆ ನಿಂತು ತಲೆಯನ್ನು ಮೇಲಕ್ಕೆ ಎತ್ತಿಕೊಂಡು "ಮಿಯಾವ್! ಮಿಯಾವ್!" ಎಂದು ಒಂದೇ ಸಮನೆ ಅರಚಲು ಆರಂಭಿಸಿತು. ಎಂದೂ ಕೇಳದ ಈ ವಿಚಿತ್ರವಾದ ಕೂಗನ್ನು ಕೇಳಿ ರಾಜನಿಗೆ ಗಾಬರಿಯಾಯಿತು. ಅವನಿಗೆ ಆ ಕೂಗಿನ ಅರ್ಥ ಗೊತ್ತಾಗಲಿಲ್ಲ. ಆದ್ದರಿಂದ ಅವನು ಪ್ರಜೆಗಳನ್ನೆಲ್ಲಾ ಅರಮನೆಗೆ ಕರೆಸಿದ. ಅವರಲ್ಲಿ ಅನೇಕರು ಅದನ್ನು ಕೇಳಿ ಹೆದರಿಕೆಯಿಂದ ತತ್ತರಿಸುತ್ತ ಎದ್ದೆವೋ ಬಿದ್ದೆವೋ ಎನ್ನದೆ ಕಾಲುಕಿತ್ತರು. ದಿಕ್ಕೇ ತೋಚದಂತಾಗಿ ರಾಜ ತನ್ನ ಮಂತ್ರಿಗಳನ್ನೆಲ್ಲಾ ಸಭೆ ಸೇರಿಸಿ ಏನು ಮಾಡಬೇಕೆಂದು ಅವರ ಸಲಹೆ ಕೇಳಿದ. ಬಹಳ ಹೊತ್ತು ದೀರ್ಘವಾದ ಚರ್ಚೆ ನಡೆಯಿತು. ಕಡೆಗೆ ಬೆಕ್ಕಿನ ಬಳಿಗೆ ಒಬ್ಬ ದೂತನನ್ನು ಕಳುಹಿಸಬೇಕೆಂದೂ ಅದು ಅರಮನೆಯನ್ನು ತಕ್ಷಣವೇ ಬಿಟ್ಟು ಹೊರಡದಿದ್ದರೆ ಅದರ ಮೇಲೆ ತಾವು ಬಲಾತ್ಕಾರವನ್ನು ಪ್ರಯೋಗಿಸುವುದಾಗಿಯೂ ಅವನು ಅದಕ್ಕೆ ತಿಳಿಸಬೇಕೆಂದು ಅವರು ತೀರ್ಮಾನಿಸಿದರು. "ಇಲಿಗಳ ಸಂಖ್ಯೆ ವಿಪರೀತವಾಗಿ ತೊಂದರೆ ಪಟ್ಟರೂ ಚಿಂತೆಯಿಲ್ಲ, ಈ ಬೆಕ್ಕಿನ ಸಹವಾಸದಲ್ಲಿ ಪ್ರಾಣವನ್ನೇ ಕಳೆದುಕೊಳ್ಳುವುದು ಮಾತ್ರ ನಮ್ಮಿಂದ ಆಗದು" ಎನ್ನುವುದು ಅವರ ವಾದವಿವಾದಗಳ ಸಾರಾಂಶವಾಗಿತ್ತು. ಇಲಿಗಳನ್ನು ನುಂಗಿದ್ದುದು ಸಾಲದೆ ಮನುಷ್ಯರನ್ನೂ ತಿನ್ನಬೇಕೆಂದು ಬೆಕ್ಕು ಹಾಗೆ ಬಿಡುವಿಲ್ಲದೆ ಒರಲುತ್ತಿದ್ದಿತೆಂದು ಅವರು ಭಾವಿಸಿದರು. ಅಂತೂ ಅವರ ನಿರ್ಣಯದ ಪ್ರಕಾರ ಒಬ್ಬ ಸೇವಕ ಬೆಕ್ಕಿನ ಎದುರಿಗೆ ಹೋಗಿ ಗಡಗಡನೆ ನಡುಗುತ್ತ ದೂರದಲ್ಲಿ ನಿಂತು, ಭಕ್ತಿಯಿಂದ ಕೈ ಜೋಡಿಸಿಕೊಂಡು "ಅರಮನೆಯನ್ನು ಬಿಟ್ಟು ಹೊರಡಲು ತಮಗೆ ಇಷ್ಟವಿದೆಯೋ ಇಲ್ಲವೋ ಕೇಳಿಬಾ ಎಂದು ಅಪ್ಪಣೆಯಾಗಿದೆ" ಎಂದು ತಡೆದು ತಡೆದು ಮೆಲ್ಲನೆ ನುಡಿದ. ಬೆಕ್ಕಿಗೆ ಕ್ಷಣಕ್ಷಣಕ್ಕೂ ಬಾಯಾರಿಕೆ ಹೆಚ್ಚುತ್ತಲೇ ಇತ್ತು. ಅದು ಮತ್ತೆ

“ಮಿಯಗಾವ್! ಮಿಯೂವ್!” ಎಂದಿತು. ಇದಕ್ಕೆ “ಇಲ್ಲ! ಇಲ್ಲ!” ಎಂದು ಅರ್ಥಮಾಡಿ ಸೇವಕ ರಾಜನಿಗೆ ಹಾಗೆಯೇ ತಿಳಿಸಿದ. ಮಂತ್ರಿಗಳೆಲ್ಲಾ “ಹಾಗಾದರೆ ಬಲಾತ್ಕಾರ ಪ್ರಯೋಗವೇ ಇದಕ್ಕೆ ಮದ್ದು” ಎಂದು ಕೂಗಿದರು. ಅನಂತರ ಅಲ್ಲಿದ್ದವರೆಲ್ಲಾ ಸೇರಿ ಅರಮನೆಗೆ ಬೆಂಕಿ ಹೊತ್ತಿಸಿ ಸುಟ್ಟರು. ಬೆಂಕಿಯು ಉರಿ ಬೆಕ್ಕು ಇದ್ದ ಕೊಠಡಿಗೆ ಬಂದಾಗ ಅದು ಕಿಟಕಿಯ ಮೂಲಕ ಹೊರಕ್ಕೆ ಹಾರಿ ಯಾರೂ ಕಾಣದ ಹಾಗೆ ತಪ್ಪಿಸಿಕೊಂಡು ಓಡಿಹೋಯಿತು. ಅರಮನೆ ನೆಲಸಮವಾಯಿತು.

# ತುಂಟರ ನೆಂಟ ಕುಂಟ

ಒಂದು ರಾಜ್ಯದಲ್ಲಿ ಒಬ್ಬ ಬಡವನಿದ್ದ. ಅವನಿಗೊಬ್ಬ ಮಗಳಿದ್ದಳು. ಅವಳು ಬಹಳ ಚೆಲುವೆ. ಚೆಲುವಿನಲ್ಲಿ ಮಾತ್ರವೇ ಅಲ್ಲ, ಜಾಣತನದಲ್ಲಿ ಕೂಡ ಅವಳನ್ನು ಮೀರಿಸುವವರು ಯಾರೂ ಇರಲಿಲ್ಲ. ತನಗೆ ಇಂಥ ಮಗಳಿರುವಳಲ್ಲಾ ಎಂದು ಅವಳ ಅಪ್ಪನಿಗೆ ಅಸಾಧ್ಯ ಗರ್ವ. ಒಂದು ದಿನ ಅವನು ಆ ದೇಶದ ರಾಜನ ಹತ್ತಿರ ಹೋಗಿ "ನನ್ನ ಮಗಳು ಒಣಗಿದ ಹುಲ್ಲಿನಿಂದ ಬೇಕಾದರೆ ಬಂಗಾರದ ನೂಲು ತೆಗೆಯಬಲ್ಲಳು" ಎಂದು ಹೇಳಿಕೊಂಡ. ರಾಜನಿಗೆ ದುಡ್ಡೆಂದರೆ ಪ್ರಾಣಕ್ಕಿಂತಲೂ ಹೆಚ್ಚು. ಬಡವ ಜಂಭಕೊಚ್ಚಿಕೊಂಡುದನ್ನು ಕೇಳಿದ ಕೂಡಲೆ ಅವನ ದುರಾಸೆ ಮತ್ತಷ್ಟು ಏರಿತು. ಹುಡುಗಿಯನ್ನು ತನ್ನ ಎದುರಿಗೆ ತರಬೇಕೆಂದು ಅಪ್ಪಣೆ ಮಾಡಿದ. ಅವಳು ಅರಮನೆಗೆ ಬಂದ ಕೂಡಲೆ, ರಾಜ ಅವಳನ್ನು ಒಣ ಹುಲ್ಲಿನ ದೊಡ್ಡ ರಾಶಿಯೇ ಇದ್ದ ಒಂದು ಕೋಣೆಗೆ ಕರೆದುಕೊಂಡು ಹೋದ. ಅವಳ ಮುಂದೆ ಒಂದು ರಾಟೆಯನ್ನಿಟ್ಟು, "ಇಷ್ಟು ಹುಲ್ಲಿನಿಂದಲೂ ಬೆಳಗಾಗುವ ಹೊತ್ತಿಗೆ ಬಂಗಾರದ ನೂಲು ತೆಗೆದಿರಬೇಕು. ಇಲ್ಲದಿದ್ದರೆ ನಿನ್ನ ಜೀವ ಹಾರಿಸಿಬಿಡುತ್ತೇನೆ" ಎಂದ. ಪಾಪ, ಆ ಬಡಪಾಯಿ ಹುಡುಗಿ ತನಗೆ ಆ ಕೆಲಸ ಬರುವುದಿಲ್ಲವೆಂದು ಎಷ್ಟೋ ವಿಧವಾಗಿ ಹೇಳಿಕೊಂಡು ಅತ್ತಳು. ಪ್ರಯೋಜನವಾಗಲಿಲ್ಲ. ಕೋಣೆಗೆ ಬೀಗ ಬಿದ್ದೇ ಬಿಟ್ಟಿತು. ಒಳಗಡೆ ಅವಳೊಬ್ಬಳೇ ಉಳಿದಳು.

ಹುಡುಗಿ ಕೋಣೆಯ ಒಂದು ಮೂಲೆಯಲ್ಲಿ ಕುಳಿತು ತನ್ನ ದುರದೃಷ್ಟಕ್ಕಾಗಿ ಗೋಳಾಡಲು ಆರಂಭಿಸಿದಳು. ಆಗ ಇದ್ದಕ್ಕಿದ್ದಂತೆಯೇ ಬಾಗಿಲು ತೆರೆಯಿತು. ವಿಚಿತ್ರವಾಗಿ ಕಾಣುತ್ತಿದ್ದ ಕುಳ್ಳನೊಬ್ಬ ಕುಂಟುತ್ತ

ಒಳಕ್ಕೆ ಬಂದ. ಅವನು "ಮಗಳೆ, ನೀನೇಕೆ ಹೀಗೆ ಅಳುತ್ತಿರುವೆ?" ಎಂದು ಕೇಳಿದ. ಅವಳು "ಅಯ್ಯೋ, ಏನು ಹೇಳಲಿ? ಈ ಹುಲ್ಲಿನಿಂದ ಬಂಗಾರದ ನೂಲು ತೆಗೆಯಬೇಕಂತೆ. ಅದು ಹೇಗೋ, ದೇವರೇ ಬಲ್ಲ!" ಎಂದು ಅತ್ತಳು. ಕುಳ್ಳ "ನಾನು ಆ ಕೆಲಸ ಮಾಡಿಕೊಟ್ಟರೆ ಏನು ಕೊಡುವೆ?" ಎಂದ. ಹುಡುಗಿ "ನನ್ನ ಕೊರಳಿನ ಸರ ಕೊಡುತ್ತೇನೆ" ಎಂದಳು. ಅವಳ ಮಾತಿನಲ್ಲಿ ನಂಬಿಕೆಯಿಟ್ಟು ಅವನು ರಾಟೆಯ ಮುಂದೆ ಕುಳಿತ. ರಾಟೆಯ ಚಕ್ರ ಗಿರ್ರನೆ ತಿರುಗಿತು. ಸ್ವಲ್ಪ ಹೊತ್ತಿನಲ್ಲೇ ಹುಲ್ಲೆಲ್ಲಾ ಬಂಗಾರದ ನೂಲಾಗಿಬಿಟ್ಟಿತು.

ರಾಜ ಬಂದು ನೋಡಿದಾಗ ಅವನಿಗೆ ಬಹಳ ಆಶ್ಚರ್ಯವೂ ಸಮಾಧಾನವೂ ಆಯಿತು. ಆದರೆ ಇದರ ಜೊತೆಗೆ ಅವನ ಆಸೆ ಇನ್ನೂ ಬೆಳೆಯಿತು. ಅವನು ಬಡವನ ಮಗಳನ್ನು ಇನ್ನೊಂದು ಸಾರಿ ಕೋಣೆಯಲ್ಲಿ ಕೂಡಿಹಾಕಿ, ಕೆಲಸ ಹೊರಿಸಿದ. ಏನು ಮಾಡಬೇಕೆಂದು ಅವಳಿಗೆ ತೋಚಲಿಲ್ಲ. ಸರಿ, ಮತ್ತೆ ಮೊದಲಾಯಿತು ಕಣ್ಣೀರು. ಕೂಡಲೆ ಹಿಂದಿನ ದಿನ ಬಂದಿದ್ದ ಕುಳ್ಳ ಬಾಗಿಲು ತೆಗೆದುಕೊಂಡು ಬಂದು "ನಿನ್ನ ಕೆಲಸ ಮಾಡಿಕೊಟ್ಟರೆ ಏನು ಕೊಡುವೆ?" ಎಂದ. ಅವಳು "ನನ್ನ ಬೆರಳಿಗಿರುವ ಉಂಗುರ" ಎಂದಳು. ಅವಳ ಉಂಗುರ ಅವನ ಕೈಸೇರಿತು. ಅವನು ಕೆಲಸಕ್ಕೆ ಆರಂಭಿಸಿದ. ಪುನಃ ಬೆಳಗಾಗುವುದರೊಳಗೆ ಹುಲ್ಲಿನ ರಾಶಿ ಬಂಗಾರದ ನೂಲಿನ ಉಂಡೆಯಾಗಿತ್ತು.

ಥಳಥಳಿಸುತ್ತಿದ್ದ ಈ ಚಿನ್ನದ ದಾರವನ್ನು ನೋಡಿದಂತೆಲ್ಲಾ ರಾಜನ ಎದೆ ಸಂತೋಷದಿಂದ ಉಬ್ಬಿಹೋಯಿತು. ಅಷ್ಟಾದರೂ ಅವನಿಗೆ ತೃಪ್ತಿಯಾಗಲಿಲ್ಲ. ಮೂರನೆಯ ದಿನ ಅವನು ಬಡವನ ಮಗಳನ್ನು ಇನ್ನೂ ದೊಡ್ಡದಾದ ಕೋಣೆಗೆ ಕರೆದುಕೊಂಡು ಹೋದ. ಅಲ್ಲೊಂದು ಹುಲ್ಲಿನ ಮೆದೆಯೇ ಇತ್ತು. "ಇದನ್ನೆಲ್ಲಾ ಈ ರಾತ್ರಿ ನೂಲಬೇಕು. ಅಷ್ಟು ಮಾಡಿದರೆ ನೀನು ನನ್ನ ರಾಣಿಯಾಗುವೆ" ಎಂದು ಹೇಳಿ ಹೊರಟು ಹೋದ. ಹುಡುಗಿ ಒಬ್ಬಳೇ ಆದಕೂಡಲೆ ಕುಳ್ಳ ಒಳಗೆ ಬಂದು "ಈ ಸಾರಿಯೂ ಬಂಗಾರದ ನೂಲು ತೆಗೆದುಕೊಡುತ್ತೇನೆ, ಏನು ಕೊಡುವೆ?" ಎಂದ. ಅವಳು "ನನ್ನ ಹತ್ತಿರ ಇನ್ನೇನೂ ಇಲ್ಲವಲ್ಲ!" ಎಂದಳು.

ಅದಕ್ಕೆ ಅವನು "ಹಾಗಾದರೆ, ನೀನು ರಾಣಿಯಾದ ಮೇಲೆ ನಿನಗೆ ಹುಟ್ಟುವ ಮೊದಲನೆಯ ಮಗುವನ್ನು ನನಗೆ ಒಪ್ಪಿಸುತ್ತೇನೆಂದು ಮಾತು ಕೊಡು" ಎಂದ. ಹುಡುಗಿಗೆ ತಾನು ರಾಣಿಯಾಗುವಳೆಂಬ ನಂಬಿಕೆ ಇರಲಿಲ್ಲ. ಒಂದು ವೇಳೆ ರಾಣಿಯಾದರೂ ಮಕ್ಕಳಾಗುವುವೆಂಬ ಖಂಡಿತ ವೇನು? ಆದರೆ ಅವಳಿಗೆ ರಾಜ ಕೊಟ್ಟಿದ್ದ ಕೆಲಸವನ್ನು ಮಾಡಿ ಮುಗಿಸಲು ಬೇರೆ ಉಪಾಯವಿರಲಿಲ್ಲ. ಆದ್ದರಿಂದ ಅವನು ಕೇಳಿದುದಕ್ಕೆ ಸಮ್ಮತಿಸಿದಳು. ಅವನು ಮೂರನೆಯ ಸಾರಿ ಆ ಒಣ ಹುಲ್ಲಿನ ರಾಶಿಯಿಂದ ಬಂಗಾರದ ಎಳೆಗಳನ್ನು ನೂತು ತೆಗೆದ. ಮಾರನೆಯ ದಿನ ಬೆಳಗ್ಗೆ ರಾಜ ಬಂದ. ಅವನ ಆಸೆ ನೆರವೇರಿತ್ತು. ಆದ್ದರಿಂದ ಅವನು ಅವಳನ್ನು ಮದುವೆಯಾದ. ಬಡವನ ಮಗಳು ನಿಜವಾಗಿಯೂ ರಾಣಿಯಾಗಿಯೇ ಬಿಟ್ಟಳು.

ಅವಳ ಮೊದಲನೆಯ ಪುಟ್ಟ ಮಗು ಹುಟ್ಟಿದಾಗ ರಾಣಿಗೆ ಬಹಳ ಸಂತೋಷವಾಯಿತು. ಈ ಸಂತೋಷದಲ್ಲಿ ಅವಳು ತನಗೆ ಹಿಂದೆ ಸಹಾಯ ಮಾಡಿದ್ದ ಕುಳ್ಳನನ್ನೂ ತಾನು ಅವನಿಗೆ ಕೊಟ್ಟಿದ್ದ ಮಾತನ್ನೂ ಮರೆತೇ ಬಿಟ್ಟಳು. ಆದರೆ ಅವನು ಬಿಡುವನೆ? ಒಂದು ದಿನ ಅವಳ ಕೋಣೆಗೆ ಬಂದು ಜ್ಞಾಪಿಸಿದ. ಆಗ ಅವಳು ತನ್ನ ಕೇಡನ್ನು ನೆನೆದು ದುಃಖಿಸಿದಳು. ಮಗುವಿನ ಬದಲು ಆ ರಾಜ್ಯದಲ್ಲಿ ದೊರಯುವ ಬೇಕುಬೇಕಾದ ಐಶ್ವರ್ಯವನ್ನೆಲ್ಲಾ ಕೊಡುತ್ತೇನೆಂದು ಹೇಳಿದಳು. ಕಡೆಗೆ ಅವಳ ಕಣ್ಣೀರು ಅವನ ಮನಸ್ಸನ್ನು ಕರಗಿಸಿತು. ಅವನು "ನಾನು ನಿನಗೆ ಮೂರು ದಿನಗಳ ಅವಕಾಶ ಕೊಡುತ್ತೇನೆ. ಅಷ್ಟರೊಳಗೆ ನೀನು ನನ್ನ ಹೆಸರೇನೆಂದು ಹೇಳಿದರೆ ನಿನ್ನ ಮಗು ನಿನಗೇ ಇರಲಿ. ಇಲ್ಲದಿದ್ದರೆ ಅದನ್ನು ನನಗೆ ಕೊಟ್ಟುಬಿಡಬೇಕು" ಎಂದ.

ರಾಣಿ ತಾನು ಅದುವರೆಗೂ ಕೇಳಿದ್ದ ಬಗೆಬಗೆಯ ಹೆಸರುಗಳನ್ನೆಲ್ಲಾ ನೆನಪಿಗೆ ತಂದುಕೊಳ್ಳುತ್ತ ರಾತ್ರಿಯೆಲ್ಲಾ ಎಚ್ಚರವಾಗಿಯೇ ಇದ್ದಳು. ಇಷ್ಟಲ್ಲದೆ ಹೊಸ ಹೆಸರುಗಳನ್ನು ಕೇಳಿ ತಿಳಿದುಕೊಂಡು ಬರಲು ರಾಜ್ಯದ ಮೂಲೆ ಮೂಲೆಗೂ ಆಳುಗಳನ್ನು ಕಳುಹಿಸಿದಳು. ಮಾರನೆಯ ದಿನ ಕುಳ್ಳ ಬಂದ. ಅವಳು ತಿಮ್ಮ, ಬೊಮ್ಮ, ಜಕ್ಕ,

ಪುಟ್ಟ, ಕಿಟ್ಟ, ಮೊದಲಾದ ತನಗೆ ನೆನಪಿದ್ದ ಹೆಸರುಗಳನ್ನೆಲ್ಲಾ ಹೇಳಿದಳು. ಆದರೆ ಅವೆಲ್ಲಕ್ಕೂ ಅವನು "ನನ್ನ ಹೆಸರು ಅದಲ್ಲ!" ಎಂದು ಒಂದೇ ಉತ್ತರ ಹೇಳಿಬಿಟ್ಟ.

ಎರಡನೆಯ ದಿನ ಅವಳು ತಾನು ಕೇಳಿದ್ದ ತಮಾಷೆಯ ಹೆಸರುಗಳಿಂದ ಪ್ರಾರಂಭ ಮಾಡಿದಳು. ಸೊಟ್ಟಕಾಲು, ಗೂನುಬೆನ್ನು, ಕೆಟ್ಟ ಮೋರೆ,—ಈ ರೀತಿ ಹತ್ತಾರು ಹೆಸರು ಹೇಳಿದಳು. ಆದರೆ ಈಗಲೂ ಕೂಡ ಅವನು ಎಲ್ಲಕ್ಕೂ "ನನ್ನ ಹೆಸರು ಅದಲ್ಲ!" ಎಂದುಬಿಟ್ಟ.

ಮೂರನೆಯ ದಿನ ಅವಳು ಕಳುಹಿಸಿದ್ದ ಆಳುಗಳಲ್ಲಿ ಒಬ್ಬ ಬಂದು, "ಅಮ್ಮ, ಹೊಸ ಹೆಸರು ನನಗೆ ಯಾವುದೂ ಕೇಳಿಬರಲಿಲ್ಲ. ಆದರೆ ನಿನ್ನೆ ರಾತ್ರಿ, ನಾನು ಕಾಡಿನ ಮಧ್ಯೆ ಇರುವ ಮೊಲದ ಗುಡ್ಡವನ್ನು ಏರಿ ಹೋಗುತ್ತಿದ್ದಾಗ, ಅಲ್ಲೊಂದು ಸಣ್ಣ ಗುಡಿಸಲನ್ನು ಕಂಡೆ. ಗುಡಿಸಲ ಮುಂದೆ ಬೆಂಕಿ ಉರಿಯುತ್ತಿತ್ತು. ಆ ಬೆಂಕಿಯ ಸುತ್ತಲೂ ಒಬ್ಬ ಕುಳ್ಳ ಕುಣಿಯುತ್ತ

'ಹಾರುತ ಹಾಡುವೆ ಪದ್ಯವನು,
ಕುಡಿಯುತ ಕುಣಿಯುವೆ ಮದ್ಯವನು;
ಓಡುತ ತರುವೆನು ಮಗುವನ್ನು,
ನೋಡುತ ನಲಿವೆನು ನಗುವನ್ನು;
ಅರಿಯಳು ರಾಣಿಯು ಭಂಟನನು
ತುಂಟರ ನೆಂಟನು ಕುಂಟನನು'

ಎಂದು ಹಾಡುತ್ತಿದ್ದ" ಎಂದು ಹೇಳಿದ.

ಸೇವಕನ ಮಾತನ್ನು ಕೇಳಿ ರಾಣಿ ಸಂತೋಷದಿಂದ ನೆಗೆದೇ ಬಿಟ್ಟಳು. ಆ ದಿನ ಕುಳ್ಳ ಬಂದು "ರಾಣಿಯೇ ನನ್ನ ಹೆಸರೇನು?" ಎಂದು ಕೇಳಿದ ಕೂಡಲೆ ಅವಳು "ರಾಮಣ್ಣನೆ?" ಎಂದಳು. ಅವನು "ಅಲ್ಲ!" ಎಂದ. "ಕಾಮಣ್ಣನೆ?" ಎಂದಳು. ಅವನು "ಅಲ್ಲ!" ಎಂದ. "ಹಾಗಾದರೆ ನಿನ್ನ ಹೆಸರು 'ತುಂಟರ ನೆಂಟ ಕುಂಟ' ನಿರಬಹುದೆ?" ಎಂದಳು.

"ಆಹಾ! ಯಾರೋ ಮಾಟಗಾತಿ ಅದನ್ನು ನಿನಗೆ ಹೇಳಿಗಬೇಕು! ಮಾಟಗಾತಿಯೇ ಹೇಳಿಕೊಟ್ಟಿರಬೇಕು!" ಎಂದು ಕೂಗುತ್ತ ಕುಳ್ಳ ಕೋಪದಿಂದ ಕೆಂಪಗಾಗಿ, ತನ್ನ ಕುಂಟು ಕಾಲಿನಿಂದ ನೆಲವನ್ನು ಒದ್ದ. ಒದ್ದ ಜೋರಿಗೆ ಕಾಲು ನೆಲದಲ್ಲಿ ಕುಸಿದೇಹೋಯಿತು. ಅವನು ಎರಡು ಕೈಗಳಿಂದಲೂ ಅದನ್ನು ಹಿಡಿದು ಮೇಲಕ್ಕೆ ಎಳೆದು ಬಿಡಿಸಿಕೊಳ್ಳಬೇಕಾಯಿತು. ಆಮೇಲೆ ಅವನು ಇನ್ನು ಇಲ್ಲಿರಬಾರದೆಂದು ತಿಳಿದು 'ಎದ್ದೆನೊ ಬಿದ್ದೆನೊ' ಎಂದು ನೋಡದೆ ಒಂದು ಕಾಲಿನ ಮೇಲೆಯೇ ಓಡಿಹೋದ. ಉಪಯೋಗವಿಲ್ಲದೆ ಇಷ್ಟೊಂದು ಕಷ್ಟಪಟ್ಟಿದ್ದ ಅವನನ್ನು ನೋಡಿ ಅಲ್ಲಿದ್ದವರು ಆ ದಿನವೆಲ್ಲಾ ನಕ್ಕು ನಕ್ಕು ಸಾಕಾದರು.